CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ನವೆಂಬರ್ ೧೩, ೨೦೦೩ (ಕಾರ್ತಿಕ ೨೨, ಶಕ ವರ್ಷ ೧೯೨೫) | ಸಂಚಿಕೆ ೪೫ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಬರ ಪರಿಸ್ಥಿತಿಯ ಹಿನ್ನಲೆಯಲ್ಲಿ ತೋಟಗಾರಿಕೆ ರೈತರಿಗೆ ಪರಿಹಾರ ಪ್ಯಾಕೇಜ್ ಒದಗಿಸುವುದು.

**ಓದಲಾಗಿದೆ:**
1. ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ಹೊರಡಿಸಿರುವ ಆದೇಶ ಸಂಖ್ಯೆ: CD 107 CLS 20ರ ಬೆಂಗಳೂರು ದಿನಾಂಕ: 03.09.2003.
2. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ:DH:Dev:TA:55:2003-04 ದಿನಾಂಕ: 09.09.2003.

**ಪ್ರಸ್ತಾವನೆ:**

ಬರ ಪರಿಹಾರ ಕಾರ್ಯಕ್ರಮದಡಿಯಲ್ಲಿ ರೈತರಿಗಾಗಿ ಪರಿಹಾರ ಪ್ಯಾಕೇಜನ್ನು ಒದಗಿಸಲು ರೂ. 865 ಕೋಟಿಗಳ ಕಾರ್ಯಕ್ರಮವನ್ನು ಸಚಿವ ಸಂಪುಟವು ಅನುಮೋದಿಸಿದೆ. ಈ ಆಧಾರದ ಮೇರೆಗೆ ದಿನಾಂಕ: 03.09.2003 ರಂದು ಮುಖ್ಯ ಕಾರ್ಯದರ್ಶಿಗಳು ಮೇಲೆ ಓದಲಾದ (1)ರ ಆದೇಶವನ್ನು ಹೊರಡಿಸಿರುತ್ತಾರೆ. ಇದರ ಅನ್ವಯ ತೋಟಗಾರಿಕೆ ಇಲಾಖೆಗೆ ಸಂಬಂಧಿಸಿದಂತೆ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಬಿತ್ತನೆ ಸಾಮಗ್ರಿ/ ನಾಟಿಗಾಗಿ ಗಿಡಗಳನ್ನು ಒದಗಿಸುವ ಕಾರ್ಯಯೋಜನೆಯನ್ನು ತಯಾರಿಸಿ ಮೇಲೆ ಓದಲಾದ 2ರ ಪತ್ರದಲ್ಲಿ ತೋಟಗಾರಿಕೆ ನಿರ್ದೇಶಕರು ಸಲ್ಲಿಸಿ ರಾಜ್ಯಾದ್ಯಂತ ಸಣ್ಣ ಮತ್ತು ಅತಿಸಣ್ಣ ರೈತರಿಗೆ ತರಕಾರಿ ಕಿರುಚೀಲಗಳು ಹಾಗೂ ಗಿಡಗಳ ವಿತರಣೆ ಮಾಡುವ ಸಲುವಾಗಿ ಎರಡು ಕಾಂಪೊನೆಂಟ್‌ಗಳನ್ನುಳ್ಳ ಕಾರ್ಯಕ್ರಮವನ್ನು ರೂಪಿಸಿ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಅನುಮತಿ ಕೋರಿರುತ್ತಾರೆ.

ತೋಟಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 301 ತೋಯೋಕಾ 2003, ಬೆಂಗಳೂರು, ದಿನಾಂಕ:17ನೇ ಅಕ್ಟೋಬರ್, 2003**

ಬರಪರಿಸ್ಥಿತಿಯ ಹಿನ್ನಲೆಯಲ್ಲಿ ತೋಟಗಾರಿಕೆ ಬೆಳೆಗಾರರಿಗೆ ತರಕಾರಿ ಕಿರುಚೀಲಗಳು ಅಥವಾ ತೋಟಗಾರಿಕೆ ಗಿಡಗಳನ್ನು ಈ ಕೆಳಕಾಣಿಸಿದ ಮಾರ್ಗಸೂಚಿಯನ್ವಯ ಉಚಿತವಾಗಿ ಒದಗಿಸಲು ತೋಟಗಾರಿಕೆ ನಿರ್ದೇಶಕರಿಗೆ ಅನುಮತಿ ನೀಡಲಾಗಿದೆ.

1. ಬರದಿಂದಾಗಿ ನಷ್ಟ ಅನುಭವಿಸಿದ ಸಣ್ಣ ಮತ್ತು ಅತಿ ಸಣ್ಣ ರೈತರು ಮಾತ್ರ ಯೋಜನೆಯ ಲಾಭವನ್ನು ಪಡೆಯಲು ಅರ್ಹರಾಗಿರುತ್ತಾರೆ.
2. ಈ ಯೋಜನೆಯನ್ನು ಬರ ಪೀಡಿತ ಜಿಲ್ಲೆಗಳಲ್ಲಿ ಮಾತ್ರ ಅನುಷ್ಠಾನಗೊಳಿಸತಕ್ಕದ್ದು.
3. ಪ್ರತಿ ಫಲಾನುಭವಿಗೆ ಗರಿಷ್ಠ ಒಂದು ಹೆಕ್ಟೇರು ವಿಸ್ತೀರ್ಣಕ್ಕೆ ಬೇಕಾದ ತೋಟಗಾರಿಕೆ ಸಸಿ:ಕಸಿಗಳನ್ನು ಒದಗಿಸತಕ್ಕದ್ದು. ಅಂತಹ ಗಿಡಗಳು ಬರ ಪರಿಸ್ಥಿತಿಗೆ ಹೊಂದಿಕೊಳ್ಳುವಂತಹ ಜಾತಿ:ತಳಿಗಳಾಗಿರತಕ್ಕದ್ದು. ಅಥವಾ ಪ್ರತಿ ಫಲಾನುಭವಿಗೆ ಗರಿಷ್ಠ ಅರ್ಧ ಎಕರೆ ವಿಸ್ತೀರ್ಣದವರೆಗೆ ಬೆಳೆಸಲು ಬೇಕಾದ ಆಯಾ ಪ್ರದೇಶಕ್ಕೆ ಸೂಕ್ತವಾದ ತರಕಾರಿ ಬಿತ್ತನೆ ಬೀಜಗಳನ್ನು ಒದಗಿಸುವುದು.
4. ಬೆಳೆ ಬೆಳೆಯಲು ಅಗತ್ಯವಿರುವ ಕನಿಷ್ಠ ಪ್ರಮಾಣದಲ್ಲಿಯಾದರೂ ನೀರಿನ ಲಭ್ಯತೆ ಇರುವುದನ್ನು ಖಚಿತಪಡಿಸಿಕೊಳ್ಳುವುದು.
5. ಪ್ರತಿ ಫಲಾನುಭವಿಗೆ ಪ್ರತಿ ಹೆಕ್ಟೇರ್‌ಗೆ 1000 ರೂ. ದರದ ಆಧಾರದ ಮೇರೆಗೆ ಗಿಡಗಳನ್ನು ಒದಗಿಸಬಹುದು ಅಥವಾ ಪ್ರತಿ ಫಲಾನುಭವಿಗೆ ತರಕಾರಿ ಬಿತ್ತನೆ ಬೀಜವನ್ನು ಅರ್ಧ ಎಕರೆಗೆ ಬೇಕಾಗುವ ಪ್ರಮಾಣ ಅಥವಾ ರೂ. 200/ ಇವೆರಡರಲ್ಲಿ ಯಾವುದು ಕಡಿಮೆಯೋ ಅಷ್ಟು ಮೌಲ್ಯದ ಬಿತ್ತನೆ ಬೀಜಗಳನ್ನು ಒದಗಿಸುವುದು.

6. ಈ ಯೋಜನೆಯ ಆರ್ಥಿಕ ಮತ್ತು ಭೌತಿಕ ಗುರಿಗಳು ಇಂತಿವೆ:

| ಘಟಕ | ವಿಸ್ತೀರ್ಣ (ಹೆಕ್ಟೇರ್) | ಫಲಾನುಭವಿ (ಸಂಖ್ಯೆ) | ಮೊಬಲಗು (ಲಕ್ಷ ರೂ.ಗಳಲ್ಲಿ) |
|---|---|---|---|
| ಕಸಿ: ಸಸಿಗಳ ವಿತರಣೆ | 50,000 | 50,000 | 500.00 (ಇಲಾಖೆಯಲ್ಲಿ ಉತ್ಪಾದಿಸಿದ ಗಿಡಗಳನ್ನು ವಿತರಿಸುವುದು) |
| ತರಕಾರಿ ಬಿತ್ತನೆ ಬೀಜ ವಿತರಣೆ | 5,000 | 25,000 | 50.00 |
| ಒಟ್ಟು | 55,000 | 75,000 | 550.00 |

7. ಈ ಉದ್ದೇಶಕ್ಕಾಗಿ ತೋಟಗಾರಿಕೆ ಕ್ಷೇತ್ರ/ ನರ್ಸರಿಗಳಲ್ಲಿ ಉತ್ಪಾದಿಸಿ ದಾಸ್ತಾನು ಇರುವ ಸಸಿ:ಕಸಿಗಳನ್ನು ಬಳಸುವುದು.
8. ಜಿಲ್ಲಾವಾರು ಭೌತಿಕ ಹಾಗೂ ಆರ್ಥಿಕ ಗುರಿಗಳನ್ನು ಆಯಾ ಪ್ರದೇಶದ ತೋಟಗಾರಿಕೆ ಹವಮಾನವನ್ನು ಅನುಸರಿಸಿ ಬೆಳೆಯಬಹುದಾದ ಬೆಳೆಗಳು, ಬರಪರಿಸ್ಥಿತಿ, ಬೇಡಿಕೆ ಮತ್ತು ಇತರೆ ತಾಂತ್ರಿಕ ವಿಷಯಗಳನ್ನು ಆಧರಿಸಿ ಈ ಅನುದಾನವನ್ನು ಹಂಚಿಕೆ ಮಾಡಲು ತೋಟಗಾರಿಕೆ ನಿರ್ದೇಶಕರಿಗೆ ಅನುಮತಿ ನೀಡಲಾಗಿದೆ.
9. ರೈತರಿಗೆ ಮತ್ತು ಅನುಷ್ಠಾನಾಧಿಕಾರಿಗಳಿಗೆ ಈ ಯೋಜನೆಯ ವಿವರವಾದ ಮಾರ್ಗಸೂಚಿಯನ್ನು ತೋಟಗಾರಿಕೆ ನಿರ್ದೇಶಕರು ಹೊರಡಿಸಿ ಅಗತ್ಯವಿರುವ ಮಾರ್ಗದರ್ಶನ ಸಭೆ, ಪ್ರಚಾರ, ತರಬೇತಿ ಮತ್ತು ಸಾಹಿತ್ಯ ಪ್ರಕಟಣೆ ಮಾಡುವುದು. ಇತ್ಯಾದಿ ವಿಸ್ತಾರಣಾ ಕ್ರಮಗಳನ್ನು ಕೈಗೊಳ್ಳುವುದು.
10. ಈ ಯೋಜನೆಯಡಿ ಮಾಡಲಾಗುವ ಯಾವುದೇ ಖರೀದಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನ್ವಯ ಮಾಡತಕ್ಕದ್ದು.
11. ಈ ಯೋಜನೆಯನ್ನು 2003-04ನೇ ಸಾಲಿನಲ್ಲಿ ಅನುಷ್ಠಾನಗೊಳಿಸತಕ್ಕದ್ದು.
12. ಕಂದಾಯ ಇಲಾಖೆಯ ನೆರವಿನೊಂದಿಗೆ ಸರ್ಕಾರದ ಆದೇಶ ಸಂಖ್ಯೆ:RD 119 TSY 2001 ದಿನಾಂಕ: 06.03.2002ರ ಅನ್ವಯ ಫಲಾನುಭವಿಗಳ ಆಯ್ಕೆಯನ್ನು ಮಾಡತಕ್ಕದ್ದು.
13. ತೋಟಗಾರಿಕೆ ನಿರ್ದೇಶಕರು ಈ ಯೋಜನೆಯ ಆರ್ಥಿಕ ಮತ್ತು ಭೌತಿಕ ಪ್ರಗತಿಯ ವಿವರಗಳನ್ನು MMR ಹಂಚಿಕೆ ಮಾಡಿ, ಪ್ರತಿ ಮಾಹೆಯ 4ನೇ ತಾರೀಖಿನಂದು ಇ-ಮೇಲ್ ಮುಖಾಂತರ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರಿಗೆ ಮತ್ತು ತೋಟಗಾರಿಕೆ ಕಾರ್ಯದರ್ಶಿಗಳಿಗೆ ಸಲ್ಲಿಸುವುದು.

ತರಕಾರಿ ಬೀಜ ವಿತರಣೆ ಉದ್ದೇಶಕ್ಕಾಗಿ 50 ಲಕ್ಷ ರೂ.ಗಳನ್ನು (ರೂಪಾಯಿ ಐವತ್ತು ಲಕ್ಷಗಳು ಮಾತ್ರ) ತೋಟಗಾರಿಕೆ ಇಲಾಖೆಯಲ್ಲಿ ಚಾಲ್ತಿಯಲ್ಲಿರುವ ರಾಜ್ಯ ವಲಯ ಯೋಜನೆಯಾದ "ತೋಟಗಾರಿಕೆ ಬೆಳೆಗಳಿಗಾಗಿ ಉತ್ಕೃಷ್ಟ ನಾಟಿ ಮಾಡುವ ವಸ್ತುಗಳ ಉತ್ಪಾದನೆ ಮತ್ತು ವಿತರಣೆ" (2401-00-119-4-03)ರಲ್ಲಿ ತೋಟಗಾರಿಕೆ ನಿರ್ದೇಶಕರಿಗೆ ಬಿಡುಗಡೆ ಮಾಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:FD 974 EXP-VI/2003 ದಿನಾಂಕ: 11.10.2003ರಲ್ಲಿ ನೀಡಲಾದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1363 ಕೃಷಿ ಮತ್ತು ತೋಟಗಾರಿಕೆ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆಕುಕ 56 ಐಎಂಎಂ 2003, ಬೆಂಗಳೂರು, ದಿನಾಂಕ: 27ನೇ ಸೆಪ್ಟೆಂಬರ್, 2003**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ನಿರ್ದೇಶನಾಲಯದಲ್ಲಿ "ವಿಶೇಷ ಕರ್ತವ್ಯಾಧಿಕಾರಿ" ಹುದ್ದೆಯನ್ನು ಸೃಜಿಸಲಾದ ಸರ್ಕಾರಿ ಆದೇಶ ಸಂಖ್ಯೆ: ಆಕುಕ 56 ಐಎಂಎಂ 2003, ದಿನಾಂಕ: 12.09.2003ರಲ್ಲಿ ವೇತನ ಶ್ರೇಣಿಯನ್ನು ರೂ. 11,520-15,840ರ ಬದಲಾಗಿ ರೂ. 10,620-14,960 ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚೋಮಾನಾಯಕ್ ಜಿ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1366 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಸ್. ಇಂಧುದರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಅವರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವ ಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡುವ-ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 124 ಎಸ್‌ಇಎನ್ 2001, ದಿನಾಂಕ: 28.11.2002.

2. ಶ್ರೀ ಎಸ್. ಇಂದುಧರ್ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಅವರ ವರದಿ ದಿನಾಂಕ: 15.09.2003

**ಪ್ರಸ್ತಾವನೆ:**

ಶ್ರೀ ಬಿ.ಎ. ಲಾಳಗೊಂಡರ್ ಅಪರ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಅವರ ವಿರುದ್ಧದ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ: 28.11.2002ರ ಸರ್ಕಾರಿ ಆದೇಶದಲ್ಲಿ ಶ್ರೀ ಎಸ್. ಇಂದುಧರ್ ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ನಿವೃತ್ತ ನ್ಯಾಯಾಧೀಶರು ಮೇಲೆ (2)ರಲ್ಲಿ ಓದಲಾದ ದಿನಾಂಕ: 15.09.2003ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವ ಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 124 ಎಸ್‌ಇಎನ್ 2001, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್, 2003**

ಸರ್ಕಾರವು ಶ್ರೀ ಎಸ್. ಇಂದುಧರ್, ನಿವೃತ್ತ ನ್ಯಾಯಾಧೀಶರು, ಇವರು ದಿನಾಂಕ: 28.11.2002ರ ಆದೇಶದ ಅನುಸಾರ ವಿಚಾರಣೆ ನಡೆಸಿ ವಿಚಾರಣಾ ವರದಿ ಸಲ್ಲಿಸಿದ ಕಾರಣ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ: 24.04.1998 ರನ್ವಯ 5,000-00 (ಐದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳ ಗೌರವ ಧನವನ್ನು ಹಾಗೂ ಸರ್ಕಾರ ಆದೇಶ ಸಂಖ್ಯೆ: ಸಿಆಸುಇ 45 ಸೇಇವಿ 2001, ದಿನಾಂಕ: 04.03.2002 ರನ್ವಯ 1,000-00 (ಒಂದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳು ವಾಹನ ಭತ್ಯೆಯನ್ನು ಅವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052-ಸಚಿವಾಲಯ ಸಾಮಾನ್ಯ ಸೇವೆಗಳು-090 ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-014 ಇತರೆ ಭತ್ಯೆಗಳು ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1367 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**ವಿಷಯ:** ಜಂಟಿ ಇಲಾಖಾ ವಿಚಾರಣೆ (1) ಶ್ರೀ ಸಿ. ನಾಗಯ್ಯ, ಕೆಎಎಸ್ (ಹಿರಿಯ ಶ್ರೇಣಿ) (2) ಶ್ರೀ ರುದ್ರಪ್ಪ, ಕೆಎಎಸ್ (ಕಿರಿಯ ಶ್ರೇಣಿ) (3) ಶ್ರೀ ಬಿ. ಪುಟ್ಟಣ್ಣ, ಸರ್ಕಾರದ ಅಧೀನ ಕಾರ್ಯದರ್ಶಿ ಮತ್ತು ಶ್ರೀ ಜಿ.ಎ. ಜಯರಾಮರೆಡ್ಡಿ, ತಹಸೀಲ್ದಾರ್ ಗ್ರೇಡ್-2 ಅವರುಗಳ ವಿರುದ್ಧ- ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳ ನೇಮಕ-ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಕ್ರಮಾಂಕ: ಸಿಆಸುಇ 86 ಎಸ್‌ಇಎನ್ 99, ದಿನಾಂಕ: 11.02.2002.
2. ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ ಅವರ ಪತ್ರ ಕ್ರಮಾಂಕ: ಲೋಕ್:ಆರ್‌ಜಿಆರ್: ಎನ್‌ಒಎಂ: ರೂಲ್ 11:2003, ದಿನಾಂಕ: 12.09.2003.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರಿ ಸಚಿವಾಲಯದ ಕಂದಾಯ ಇಲಾಖೆ, ವಿಶೇಷ ಭೂಸ್ವಾಧೀನ ಅಧಿಕಾರಿ, ಬೆಂಗಳೂರು ಹಾಗೂ ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ಈ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಕರ್ನಾಟಕ ಭೂ ಸ್ವಾಧೀನ ಕಾಯ್ದೆಯಡಿಯಲ್ಲಿ 15 ವರ್ಷಗಳ ಹಿಂದೆ ಸ್ವಾಧೀನಪಡಿಸಿಕೊಳ್ಳಲಾಗಿದ್ದ ಬೆಂಗಳೂರು ಉತ್ತರ ತಾಲ್ಲೂಕು ದೊಮ್ಮಲೂರು ಗ್ರಾಮದ ಜಮೀನನ್ನು ತಮಗಿಲ್ಲದ ಅಧಿಕಾರ ಚಲಾಯಿಸಿ ಪರಿಹಾರ ಧನ ಪಡೆದಿದ್ದ ಭೂ ಮಾಲೀಕರಿಂದ ಪರಿಹಾರ ಧನ ವಾಪಸ್ ಮಾಡಿಸಿಕೊಂಡು ಜಮೀನನ್ನು ಹಿಂತಿರುಗಿಸುವ ಮೂಲಕ ಸರ್ಕಾರದ ನೀತಿ ನಿಯಮಗಳನ್ನು ಉಲ್ಲಂಘಿಸಿದ ಆರೋಪಕ್ಕಾಗಿ ಶ್ರೀ ಸಿ. ನಾಗಯ್ಯ, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಶ್ರೀ ರುದ್ರಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಶ್ರೀ ಬಿ. ಪುಟ್ಟಣ್ಣ, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯದ ಹಾಗೂ ಶ್ರೀ ಜಿ.ಎ. ಜಯರಾಮ ರೆಡ್ಡಿ, ತಹಸೀಲ್ದಾರ್ ಗ್ರೇಡ್-2 ಅವರುಗಳ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ: 11.02.2002ರ ಸರ್ಕಾರಿ ಆದೇಶದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು-5, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 12.09.2003ರ ಪತ್ರದಲ್ಲಿ ಹೆಚ್ಚುವರಿ ನಿಬಂಧಕರು, ವಿಚಾರಣೆಗಳು-5 ಅವರಿಗೆ ಹಲವಾರು ಪ್ರಾಮುಖ್ಯವಾದ ಹಾಗೂ ತುರ್ತು ಗಮನ ಹರಿಸಬೇಕಾದ ಕಾರ್ಯಗಳನ್ನು ಹಂಚಿದ್ದು ಅವರು ಅದರಲ್ಲಿ ನಿರತವಾಗಿರುವ ಕಾರಣ ಬದಲೀ ವಿಚಾರಣಾಧಿಕಾರಿಯನ್ನು ನೇಮಿಸಲು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಕ್ರಮಾಂಕ: ಸಿಆಸುಇ 86, ಎಸ್‌ಇಎನ್ 99, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್, 2003**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 13ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ ನಿಯಮ 11, 11ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ದಿನಾಂಕ: 11.02.2002ರ ಸರ್ಕಾರಿ ಆದೇಶವನ್ನು ಮಾರ್ಪಡಿಸಿ ಶ್ರೀ ಸಿ. ನಾಗಯ್ಯ, ಕೆ.ಎ.ಎಸ್ (ಹಿರಿಯ ಶ್ರೇಣಿ) ಅಧಿಕಾರಿ, ಶ್ರೀ ರುದ್ರಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಶ್ರೀ ಬಿ. ಪುಟ್ಟಣ್ಣ, ಅಧೀನ ಕಾರ್ಯದರ್ಶಿ ಹಾಗೂ ಜಿ.ಎ. ಜಯರಾಮರೆಡ್ಡಿ ತಹಸೀಲ್ದಾರ್ ಗ್ರೇಡ್-2 ಅವರುಗಳ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸಲು ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 (5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಮೇಲೆ ಹೇಳಿದ ವಿಚಾರಣಾಧಿಕಾರಿಗೆ ಸಂಬಂಧಪಟ್ಟ ಅಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1368 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಹನುಮಂತಪ್ಪ, ನಿವೃತ್ತ ಮುಖ್ಯ ಇಂಜಿನಿಯರ್ ಹಾಗೂ ಶ್ರೀ ಸಿ. ವಿಶ್ವನಾಥ್, ನಿವೃತ್ತ ಎಕ್ಸಿಕ್ಯೂಟಿವ್ ಇಂಜಿನಿಯರ್‌ಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳ ನೇಮಕ-ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಕ್ರಮಾಂಕ: ಸಿಆಸುಇ 54 ಎಸ್‌ಇಎನ್ 99, ದಿನಾಂಕ: 02.01.2002.

2. ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ ಅವರ ಪತ್ರ ಸಂಖ್ಯೆ: ಲೋಕ್:ಆರ್‌ಜಿಆರ್:ಎನ್‌ಓಎಂ:ರೂಲ್11: 2003, ದಿನಾಂಕ: 12.09.2003.

**ಪ್ರಸ್ತಾವನೆ:**

ತುಂಗಾ ಮೇಲ್ದಂಡೆ ಯೋಜನೆ ವೃತ್ತ, ಶಿವಮೊಗ್ಗದಲ್ಲಿ ಸೂಪರಿಂಟೆಂಡಿಂಗ್ ಇಂಜಿನಿಯರಾಗಿ ಹಾಗೂ ತುಂಗಾ ಮೇಲ್ದಂಡೆ ಯೋಜನಾ ವಿಭಾಗ, ರಾಣೆಬೆನ್ನೂರು ಇಲ್ಲಿ ಎಕ್ಸಿಕ್ಯೂಟಿವ್ ಇಂಜಿನಿಯರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ ಸಾಕಷ್ಟು ಹಣಕಾಸು ಲಭ್ಯವಿದ್ದರೂ ಸಹ ಪ್ರಗತಿಯನ್ನು ಸಾಧಿಸಲು ವಿಫಲವಾದ ಹಾಗೂ ರಾಣೆಬೆನ್ನೂರು ವಿಭಾಗದಲ್ಲಿ ಹಣಕಾಸಿನ ಅವ್ಯವಹಾರಗಳನ್ನು ತಡೆಯಲು ವಿಫಲರಾಗಿ ಸರ್ಕಾರಕ್ಕೆ ಆರ್ಥಿಕ ನಷ್ಟವುಂಟು ಮಾಡಿದ ಆರೋಪಕ್ಕಾಗಿ ಶ್ರೀ ಹನುಮಂತಪ್ಪ, ನಿವೃತ್ತ ಮುಖ್ಯ ಇಂಜಿನಿಯರ್ ಹಾಗೂ ಶ್ರೀ ಸಿ. ವಿಶ್ವನಾಥ್, ನಿವೃತ್ತ ಎಕ್ಸಿಕ್ಯೂಟಿವ್ ಇಂಜಿನಿಯರ್ ಅವರುಗಳ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ: 02.01.2002ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಅಪರ ನಿಬಂಧಕರು, ವಿಚಾರಣೆಗಳು-5, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 12.09.2003ರ ತಮ್ಮ ಪತ್ರದಲ್ಲಿ ಹೆಚ್ಚುವರಿ ನಿಬಂಧಕರು, ವಿಚಾರಣೆಗಳು-5 ಅವರಿಗೆ ಕೆಲವು ಪ್ರಮುಖ ಕಾರ್ಯಗಳನ್ನು ವಹಿಸಿರುವ ಕಾರಣ ಬದಲೀ ವಿಚಾರಣಾಧಿಕಾರಿಗಳನ್ನು ನೇಮಿಸುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಕ್ರಮಾಂಕ: ಸಿಆಸುಇ 54 ಎಸ್‌ಇಎನ್ 99, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್, 2003**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 13, 11, 11-ಎ ರೊಡನೆ ಓದಿಕೊಂಡಂತೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ದಿನಾಂಕ: 02.01.2002ರ ಸರ್ಕಾರಿ ಆದೇಶವನ್ನು ಮಾರ್ಪಡಿಸಿ ಶ್ರೀ ಹನುಮಂತಪ್ಪ, ನಿವೃತ್ತ ಮುಖ್ಯ ಇಂಜಿನಿಯರ್ ಹಾಗೂ ಶ್ರೀ ಸಿ. ವಿಶ್ವನಾಥ್, ನಿವೃತ್ತ ಎಕ್ಸಿಕ್ಯೂಟಿವ್ ಇಂಜಿನಿಯರ್ ಅವರುಗಳ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸಲು ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 (5) (ಸಿ)ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಮೇಲೆ ಹೇಳಿದ ವಿಚಾರಣಾಧಿಕಾರಿಗಳಿಗೆ ಸಂಬಂಧಪಟ್ಟ ಅಧಿಕಾರಿಯನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1369 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಬಿ. ದಯಾನಂದ, ಮುಖ್ಯ ಇಂಜಿನಿಯರ್ ವಿರುದ್ಧ ಇಲಾಖಾ ವಿಚಾರಣೆ- ಮಂಡನಾಧಿಕಾರಿ ನೇಮಕ-ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಕ್ರಮಾಂಕ:ಸಿಆಸುಇ 103 ಎಸ್‌ಇಎನ್ 2002, ದಿನಾಂಕ: 24.09.2003.

2. ಅನಧಿಕೃತ ಟಿಪ್ಪಣಿ ಸಂಖ್ಯೆ: ಗ್ರಾಅಪ 79 ಜಿಪಅ 2003, ದಿನಾಂಕ: 03.10.2003 ಸರ್ಕಾರದ ಕಾರ್ಯದರ್ಶಿ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಅವರಿಂದ.

**ಪ್ರಸ್ತಾವನೆ:**

ಹಾಸನ ಜಿಲ್ಲಾ ಪಂಚಾಯತ್ ಚನ್ನರಾಯಪಟ್ಟಣ ಲೋಕೋಪಯೋಗಿ ವಿಭಾಗದಲ್ಲಿ ಎಕ್ಸಿಕ್ಯೂಟಿವ್ ಇಂಜಿನಿಯರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾಗ ಸಿಮೆಂಟ್ ಖರೀದಿ ಅವ್ಯವಹಾರಕ್ಕೆ ಸಂಬಂಧಿಸಿದಂತೆ ಬಿ. ದಯಾನಂದ, ಮುಖ್ಯ ಇಂಜಿನಿಯರ್ ವಿರುದ್ಧ ಮೇಲೆ

(1)ರಲ್ಲಿ ಓದಲಾದ ದಿನಾಂಕ: 24.09.2003ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿಯೂ ಶ್ರೀ ಎ. ಹೊನ್ನಪ್ಪ ನಾಯಕ್, ಅಧೀನ ಕಾರ್ಯದರ್ಶಿ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಅವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಿಸಲಾಯಿತು. ಕಾರ್ಯದರ್ಶಿ, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 03.10.2003ರ ಅನಧಿಕೃತ ಟಿಪ್ಪಣಿಯಲ್ಲಿ ಶ್ರೀ ಎ. ಹೊನ್ನಪ್ಪ ನಾಯಕ್, ಅವರು ವಿಚಾರಣಾ ಪ್ರಕರಣಗಳು, ಉಚ್ಚ ನ್ಯಾಯಾಲಯ ಪ್ರಕರಣಗಳು, ಇತ್ಯಾದಿ ಹೆಚ್ಚಿನ ಕಾರ್ಯಭಾರ ಇರುವ ವಿಷಯಗಳನ್ನು ನಿರ್ವಹಿಸುತ್ತಿದ್ದು ಅವರಿಗೆ ಮಂಡನಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಕಷ್ಟವಾಗುವುದರಿಂದ ಅವರ ಬದಲಿಗೆ ಶ್ರೀ ಕೆ. ಯಾಲಕ್ಕಿ ಗೌಡ, ಉಪ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಹಾಸನ ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಕ್ರಮಾಂಕ: ಸಿಆಸುಇ 103 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್, 2003**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11 (5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ದಿನಾಂಕ: 24.09.2003ರ ಸರ್ಕಾರಿ ಆದೇಶವನ್ನು ಭಾಗಶಃ ಮಾರ್ಪಡಿಸಿ ಶ್ರೀ ಕೆ. ಯಾಲಕ್ಕಿಗೌಡ, ಉಪ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಹಾಸನ ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1370 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಶಿಕ್ಷಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಇಡಿ 180 ಡಿಸಿಇ 2003, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್, 2003**

ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧ-1ರಲ್ಲಿ ಕಾಣಿಸಿರುವ ಕಾಲೇಜು ಶಿಕ್ಷಣ ಇಲಾಖೆಯಡಿಯಲ್ಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿನ ಅನಗತ್ಯವಿರುವ ವಿಷಯಗಳ 214 ಉಪನ್ಯಾಸಕರ ಖಾಲಿ ಹುದ್ದೆಗಳನ್ನು ಅಗತ್ಯವಿರುವ ವಿಷಯಗಳ 214 ಉಪನ್ಯಾಸಕರ ಹುದ್ದೆಗಳಾಗಿ ಪರಿವರ್ತಿಸಲಾಗಿದೆ.

ಕಾಲೇಜು ಶಿಕ್ಷಣ ಇಲಾಖೆಯಡಿಯಲ್ಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿನ ಎನ್.ಇ.ಟಿ./ಎಸ್.ಎಲ್.ಇ.ಟಿ./ ಪಿ.ಹೆಚ್.ಡಿ./ ಎಂ.ಫಿಲ್. ಪಾಸು ಮಾಡಿರುವ ಅನುಬಂಧ-2ರಲ್ಲಿ ಕಾಣಿಸಿರುವ ಅರೆಕಾಲಿಕ ಉಪನ್ಯಾಸಕರ ಸೇವೆಯನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಕರ್ನಾಟಕ ಶಿಕ್ಷಣ ಇಲಾಖೆ ಸೇವೆಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿರುವ ವ್ಯಕ್ತಿಗಳ ವಿಲೀನಗೊಳಿಸುವಿಕೆ (ಕಾಲೇಜು ಶಿಕ್ಷಣ ಇಲಾಖೆ (ವಿಶೇಷ)) ನಿಯಮಗಳು 1996 ಮತ್ತು ಇದಕ್ಕೆ ಕಾಲಕಾಲಕ್ಕೆ ಹೊರಡಿಸಲ್ಪಟ್ಟ ತಿದ್ದುಪಡಿಗಳಡಿಯಲ್ಲಿನ ಅವಕಾಶದನ್ವಯ ಈ ನಿಯಮಾವಳಿಗಳಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಲ್ಲಿ ಯು.ಜಿ.ಸಿ. ವೇತನ ಶ್ರೇಣಿ ರೂ. 8000-275-13500 ರಲ್ಲಿನ ಕಾಲೇಜು ಉಪನ್ಯಾಸಕರ ಹುದ್ದೆಗಳಲ್ಲಿ ವಿಲೀನಗೊಳಿಸಲಾಗಿದೆ.

ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧ-3ರಲ್ಲಿ ಕಾಣಿಸಿರುವ ಅರ್ಹ ಅರೆಕಾಲಿಕ ಉಪನ್ಯಾಸಕರ ಸೇವೆಯನ್ನು ಕಾಲೇಜು ಶಿಕ್ಷಣ ಇಲಾಖೆಯ ಉಪನ್ಯಾಸಕರ ಸೇವೆಯಲ್ಲಿ ವಿಲೀನಗೊಳಿಸಲು ಅಗತ್ಯವಿರುವ ಹುದ್ದೆಗಳಿಗನುಸಾರವಾಗಿ ಅವರುಗಳ ಸೇವಾ ಜೇಷ್ಠತೆ ಮತ್ತು ಮೀಸಲಾತಿ ಬಿಂದುಗಳನ್ನು ಅನುಸರಿಸಿ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಕರ್ನಾಟಕ ಶಿಕ್ಷಣ ಇಲಾಖೆ ಸೇವೆಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿರುವ ವ್ಯಕ್ತಿಗಳ ವಿಲೀನಗೊಳಿಸುವಿಕೆ (ಕಾಲೇಜು ಶಿಕ್ಷಣ ಇಲಾಖೆ (ವಿಶೇಷ)) ನಿಯಮಗಳು 1996ಕ್ಕೆ ಹೊರಡಿಸುವ ತಿದ್ದುಪಡಿಗೆ ಬದ್ಧವಾಗಿರುವ ಷರತ್ತಿಗೊಳಪಡಿಸಿ ಮತ್ತು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಲ್ಲಿ ಕಾಲೇಜು ಶಿಕ್ಷಣ ಇಲಾಖೆಯಲ್ಲಿನ ಉಪನ್ಯಾಸಕರ ಹುದ್ದೆಯಲ್ಲಿ ರಾಜ್ಯ ವೇತನ ಶ್ರೇಣಿ ರೂ. 6000-11200ನಲ್ಲಿ ವಿಲೀನಗೊಳಿಸಲಾಗಿದೆ. ಇದರಲ್ಲಿ 1993-94 ಮತ್ತು 1994-95 (ಪ.ಜಾ/ ಪ.ಪಂ. ದವರಿಗೆ ಇವೆರಡರಲ್ಲಿ ಒಂದು ವರ್ಷ)ದಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ: ಸಲ್ಲಿಸುತ್ತಿರುವ ಕೆಲವೊಂದು ಅರೆಕಾಲಿಕ ಉಪನ್ಯಾಸಕರು ಅರೆಕಾಲಿಕ ಉಪನ್ಯಾಸಕರಾಗಿ ಸೇವೆಗೆ ಸೇರುವಾಗ ಶೇಕಡ 55ಕ್ಕಿಂತ ಕಡಿಮೆ ಅಂಕಗಳನ್ನು ಪಡೆದು ನಂತರದ ವರ್ಷಗಳಲ್ಲಿ ಶೇಕಡವಾರು ಅಂಕಗಳನ್ನು ಶೇಕಡ 55ಕ್ಕಿಂತ ಹೆಚ್ಚಾಗಿ ಉತ್ತಮಪಡಿಸಿಕೊಂಡಿರುವ ಅರೆಕಾಲಿಕ ಉಪನ್ಯಾಸಕರ ಸೇವಾ ಜೇಷ್ಠತೆಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 67 ಎಸ್.ಆರ್.ಇ. 97 ದಿನಾಂಕ: 10.10.2002ರನ್ವಯ ಅವರುಗಳು ಪ್ರಥಮವಾಗಿ ಅರೆಕಾಲಿಕ ಉಪನ್ಯಾಸಕರಾಗಿ ಸೇವೆಗೆ ಸೇರಿದ ದಿನಾಂಕದಿಂದ 1994-95ರವರೆಗೆ ಸಲ್ಲಿಸಿರುವ ನಿರಂತರ ಸೇವೆಯನ್ನು ಪರಿಗಣಿಸಿ ಸೇವಾ ಜೇಷ್ಠತೆ ನಿಗದಿಪಡಿಸಿ ಪಟ್ಟಿಯಲ್ಲಿ ಸೇರಿಸಲಾಗಿದೆ.

1. ಇವರುಗಳ ನೇಮಕಾತಿಯು ತಾತ್ಕಾಲಿಕವಾಗಿದ್ದು, ಜಾರಿಯಲ್ಲಿರುವ ಸೇವಾ ಷರತ್ತುಗಳ ನಿಯಮ/ ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.
2. ಇವರುಗಳು ಅರ್ಹತಾ ಪರೀಕ್ಷೆಯಲ್ಲಿ ಶೇ.55 ಅಂಕಗಳನ್ನು ಪಡೆದಿರತಕ್ಕದ್ದು.

3. ವಿಲೀನಗೊಂಡ ಈ ಅರೆಕಾಲಿಕ ಉಪನ್ಯಾಸಕರುಗಳು ಎನ್.ಇ.ಟಿ./ಎಸ್.ಎಲ್.ಇ.ಟಿ. ಯನ್ನು ಪಾಸು ಮಾಡಲು ದಿನಾಂಕ:9.07.2005ರವರೆಗೆ ಕಾಲಾವಕಾಶ ನೀಡಲಾಗಿದೆ. ಈ ಅವಧಿಯಲ್ಲಿ ಅವರು ಎನ್.ಇ.ಟಿ./ಎಸ್.ಎಲ್.ಇ.ಟಿ.ಯನ್ನು ಪಾಸು ಮಾಡಿದಲ್ಲಿ ಅವರು ಇತರ ಅರ್ಹ ಉಪನ್ಯಾಸಕರಿಗೆ ಲಭ್ಯವಾಗುವ ಯು.ಜಿ.ಸಿ. ವೇತನ ಶ್ರೇಣಿ ಪಡೆಯಲು ಅರ್ಹರಾಗುತ್ತಾರೆ. ಅವರು ಎನ್.ಇ.ಟಿ./ಎಸ್.ಎಲ್.ಇ.ಟಿ.ಯನ್ನು ದಿನಾಂಕ: 09.07.2005ರೊಳಗೆ ಪಾಸು ಮಾಡದಿದ್ದಲ್ಲಿ ಇವರನ್ನು ಭಾರತದ ಸರ್ವೋಚ್ಚ ನ್ಯಾಯಾಲಯವು ಎಸ್.ಎಲ್.ಪಿ (ಸಿವಿಲ್) ಸಂಖ್ಯೆ:15991:99ಕ್ಕೆ ಸಂಬಂಧಿಸಿದಂತೆ ಸಿವಿಲ್ ಅಪೀಲ್ ಸಂಖ್ಯೆ:27/2001ರ ಮೇಲೆ ದಿನಾಂಕ:04.01.2001 ರಂದು ನೀಡಿದ ತೀರ್ಪಿನನ್ವಯ ಸೇವೆಯಿಂದ ತೆಗೆದು ಹಾಕಲಾಗುವುದು.

4. ಇವರು ಪರಿವೀಕ್ಷಣಾ ಅವಧಿಯಲ್ಲಿ 1974ರ ಕ.ಸ.ಸೇ (ಸೇವಾ ಮತ್ತು ಕನ್ನಡ ಭಾಷೆ ಪರೀಕ್ಷೆಗಳು) ನಿಯಮಾವಳಿಗಳಲ್ಲಿ ನಿಗದಿಪಡಿಸಿರುವ ಕನ್ನಡ ಭಾಷಾ ಮತ್ತು ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗತಕ್ಕದ್ದು. ಹಾಗೆಯೇ ಇವರು "ಒಂದು ತಿಂಗಳ ಓರಿಯೆಂಟೇಷನ್ ಕೋರ್ಸ್" ತರಬೇತಿಯನ್ನು ಕಡ್ಡಾಯವಾಗಿ ಪೂರ್ಣಗೊಳಿಸತಕ್ಕದ್ದು.

5. ಇವರ ಸೇವಾ ಜೇಷ್ಠತೆ ಮೀಸಲಾತಿ ಮತ್ತು ಅರೆಕಾಲಿಕ ಉಪನ್ಯಾಸಕರುಗಳ ಇಂಟರ್ ಸೇ ಜೇಷ್ಠತಾ ಪಟ್ಟಿಯನ್ನು ಸಿದ್ಧಪಡಿಸಿ ಪರಿಷ್ಕರಿಸುವ ಬದಲಾವಣೆಗೆ ಒಳಪಟ್ಟಿರುತ್ತದೆ.

6. ಇವರುಗಳ ನೇಮಕಾತಿಯು ಅರೆಕಾಲಿಕ ಉಪನ್ಯಾಸಕರುಗಳ ಸೇವಾ ವಿಲೀನತೆ ಬಗ್ಗೆ ಬಾಕಿಯಿರುವ: ಉದ್ಭವಿಸಲಿರುವ ನ್ಯಾಯಾಲಯದ ತಕರಾರುಗಳಲ್ಲಿ ನ್ಯಾಯಾಲಯಗಳು ನೀಡಲಿರುವ ತೀರ್ಪಿಗೆ ಬದ್ಧವಾಗಿರುವ ಷರತ್ತಿಗೆ ಒಳಪಟ್ಟಿರುತ್ತದೆ.

7. ಆಯಾ ಕಾಲೇಜಿನ ಪ್ರಾಂಶುಪಾಲರುಗಳು, ಅವರುಗಳ ವಿದ್ಯಾರ್ಹತೆ, ಜನ್ಮ ದಿನಾಂಕ, ಜಾತಿ/ ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿ ಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

8. ಮೀಸಲಾತಿ ವರ್ಗದಲ್ಲಿ ನೇಮಕಾತಿಗೊಂಡಿರುವ ಅರೆಕಾಲಿಕ ಉಪನ್ಯಾಸಕರುಗಳು ತಮ್ಮ ಜಾತಿ ದೃಢೀಕರಣದ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಕರ್ತವ್ಯ ವರದಿ ಸಲ್ಲಿಸುವಾಗ ಹಾಜರುಪಡಿಸತಕ್ಕದ್ದು.

ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧ-3ರಲ್ಲಿ ಕನ್ನಡ ವಿಭಾಗದಲ್ಲಿ ಕ್ರಮ ಸಂಖ್ಯೆ: (36)ರಲ್ಲಿನ ಶ್ರೀಮತಿ ಡೈಸಿ ಜಾಸ್ಮಿನ್ ಜಾರ್ಜ್, ರಾಜ್ಯಶಾಸ್ತ್ರ, ವಿಭಾಗದಲ್ಲಿ ಕ್ರಮಸಂಖ್ಯೆ: (69)ರಲ್ಲಿನ ಶ್ರೀ ಸತ್ಯನಾರಾಯಣ ಬಿ.ಹೆಚ್. ಮತ್ತು ಕ್ರಮ ಸಂಖ್ಯೆ: (72)ರಲ್ಲಿನ ಶ್ರೀ ಪ್ರಸನ್ನ ಕುಮಾರ್ ಕೆ. ಮತ್ತು ಎಲೆಕ್ಟ್ರಾನಿಕ್ಸ್ ವಿಭಾಗದಲ್ಲಿನ ಕ್ರಮ ಸಂಖ್ಯೆ: (4)ರಲ್ಲಿನ ಶ್ರೀ ಮೋಹನೇಶ್ ಕೆ.ಎಂ. ರವರುಗಳ ಸೇವೆ ಕುವೆಂಪು ವಿಶ್ವವಿದ್ಯಾಲಯದಲ್ಲಿ ವಿಲೀನತೆಗೆ ಅಲ್ಲಿನ ಸಿಂಡಿಕೇಟ್ ಒಪ್ಪಿದ್ದು, ಅಲ್ಲಿ ಇವರುಗಳ ವಿಲೀನತೆಗೆ ಪರಿಗಣನೆಯಲ್ಲಿರುವುದರಿಂದ ಈಗ ಸಕ್ರಮಗೊಳಿಸಲಾಗುತ್ತಿರುವವರ ಪಟ್ಟಿಯಿಂದ ಇವರುಗಳ ಹೆಸರುಗಳನ್ನು ಕೈಬಿಡಲಾಗಿದೆ.

ಈ ಉಪನ್ಯಾಸಕರುಗಳಿಗೆ ಸ್ಥಳನಿಯುಕ್ತಿ ಆದೇಶವನ್ನು ಕಾಲೇಜು ಶಿಕ್ಷಣ ಆಯುಕ್ತರು ಒಂದು ವಾರದಲ್ಲಿ ಹೊರಡಿಸುವರು. ಈ ಆದೇಶದನ್ವಯ ಸರ್ಕಾರಿ ಸೇವೆಯಲ್ಲಿ ವಿಲೀನಗೊಳಿಸಲ್ಪಟ್ಟ ಅರೆಕಾಲಿಕ ಉಪನ್ಯಾಸಕರು ಪೋಸ್ಟಿಂಗ್ ಆದೇಶ ಸ್ವೀಕರಿಸಿದ 15 ದಿನಗಳೊಳಗಾಗಿ ಪೋಸ್ಟಿಂಗ್ ಮಾಡಲ್ಪಟ್ಟ ಕಾಲೇಜಿನಲ್ಲಿ ವರದಿ ಮಾಡಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಅವರ ನೇಮಕಾತಿ ತಂತಾನೆ ರದ್ದುಗೊಳ್ಳುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿಜಾಯ್ಸ್**

ಸರ್ಕಾರದ ಉಪ ಕಾರ್ಯದರ್ಶಿ-4,

ಶಿಕ್ಷಣ ಇಲಾಖೆ.

**ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 180 ಡಿಸಿಇ 2003, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್, 2003ರ**

**ಅನುಬಂಧ-1**

ಕಾಲೇಜು ಶಿಕ್ಷಣ ಇಲಾಖೆಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಅನಗತ್ಯವಿರುವ ವಿಷಯಗಳ ಉಪನ್ಯಾಸಕರ ಖಾಲಿ ಹುದ್ದೆಗಳನ್ನು ಅಗತ್ಯವಿರುವ ವಿಷಯಗಳ ಉಪನ್ಯಾಸಕರ ಹುದ್ದೆಗಳಾಗಿ ಪರಿವರ್ತನೆ ಮಾಡಿರುವ ಪಟ್ಟಿ:

| ಕ್ರಮ ಸಂಖ್ಯೆ | ಯಾವ ವಿಷಯದಿಂದ ಪರಿವರ್ತಿಸಲಾಗಿದೆ | ಹುದ್ದೆಗಳ ಸಂಖ್ಯೆ | ಯಾವ ವಿಷಯಕ್ಕೆ ಪರಿವರ್ತಿಸಲಾಗಿದೆ | ಹುದ್ದೆಗಳ ಸಂಖ್ಯೆ |
|---|---|---|---|---|
| 1 | 2 | 3 | 4 | 5 |
| 1. | ಗೃಹ ವಿಜ್ಞಾನ-10 | 10 | ಕನ್ನಡ | 10 |
| 2. | ರಸಾಯನ ಶಾಸ್ತ್ರ-35 | 35 | ಇತಿಹಾಸ | 35 |
| 3. | ತೆಲುಗು-4<br>ರಸಾಯನ ಶಾಸ್ತ್ರ-13 | 17 | ಅರ್ಥಶಾಸ್ತ್ರ | 17 |
| 4. | ಭೌತಶಾಸ್ತ್ರ-31 | 31 | ರಾಜ್ಯಶಾಸ್ತ್ರ | 31 |
| 5. | ಸಂಸ್ಕೃತ-4 | 4 | ಸಮಾಜಶಾಸ್ತ್ರ | 4 |
| 6. | ತತ್ವಶಾಸ್ತ್ರ-4<br>ಸಂಖ್ಯಾಶಾಸ್ತ್ರ-1 | 5 | ಭೂಗೋಳ ಶಾಸ್ತ್ರ | 5 |

| 1 | 2 | 3 | 4 | 5 |
|---|---|---|---|---|
| 7. | ಉರ್ದು-1<br>ಹಿಂದಿ-4 | 5 | ಮನಃಶಾಸ್ತ್ರ | 5 |
| 8. | ತಮಿಳು-1<br>ಉರ್ದು-10<br>ಸಸ್ಯಶಾಸ್ತ್ರ-10<br>ಪ್ರಾಣಿಶಾಸ್ತ್ರ-20<br>ರೇಷ್ಮೆ ಕೃಷಿ-4 | 45 | ವಾಣಿಜ್ಯಶಾಸ್ತ್ರ | 45 |
| 9. | ಸಂಖ್ಯಾಶಾಸ್ತ್ರ-1<br>ತಮಿಳು-2 | 3 | ಎಲೆಕ್ಟ್ರಾನಿಕ್ಸ್ | 3 |
| 10. | ರಸಾಯನಶಾಸ್ತ್ರ-15 | 15 | ಬಯೋಕೆಮಿಸ್ಟ್ರಿ | 15 |
| 11. | ಹಿಂದಿ-5<br>ಸಂಖ್ಯಾಶಾಸ್ತ್ರ-2<br>ಗೃಹವಿಜ್ಞಾನ-3 | 10 | ಗಣಕ ವಿಜ್ಞಾನ | 10 |
| 12. | ಸಸ್ಯಶಾಸ್ತ್ರ-20 | 20 | ಮೈಕ್ರೋಬಯಾಲಜಿ | 20 |
| 13. | ಪ್ರಾಣಿಶಾಸ್ತ್ರ-10 | 10 | ಬಯೋಟೆಕ್ನಾಲಜಿ | 10 |
| 14. | ಆಂಗ್ಲಭಾಷೆ-4 | 4 | ಜರ್ನಲಿಸಂ | 4 |
| | ಒಟ್ಟು | 214 | | 214 |

**ಮೇರಿಜಾಯ್ಸ್**
ಸರ್ಕಾರದ ಉಪ ಕಾರ್ಯದರ್ಶಿ-4,
ಶಿಕ್ಷಣ ಇಲಾಖೆ.

**ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 180 ಡಿಸಿಇ 2003, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್, 2003ರ**

**ಅನುಬಂಧ-2**

ಸರ್ಕಾರಿ ಸೇವೆಯಲ್ಲಿ ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ವಿಲೀನಗೊಳಿಸಲ್ಪಟ್ಟ ಎನ್.ಇ.ಟಿ./ಎಸ್.ಎಲ್.ಇ.ಟಿ. ಪಾಸು ಮಾಡಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಪಟ್ಟಿ:

| ಕ್ರಮ ಸಂಖ್ಯೆ | ಮೀಸಲಾತಿ ವರ್ಗ | ಅರೆಕಾಲಿಕ ಉಪನ್ಯಾಸಕರ ಹೆಸರು | ಜನ್ಮ ದಿನಾಂಕ | ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಯಾವ ಗುಂಪಿನಿಂದ ತುಂಬಲಾಗಿದೆ |
|---|---|---|---|---|
| 1 | 2 | 3 | 4 | 5 |
| | | **ಕನ್ನಡ (ಎನ್.ಇ.ಟಿ.)** | | |
| 25 | 2 ಎ(ಸಾ) | ಅನ್ನಪೂರ್ಣ ಹತ್ತಿ ಮತ್ತುರು | 23.07.1969 | 3ಬಿ |
| 26 | ಸಾ.ಅ (ಸಾ) | ಶಿರಹಟ್ಟಿ ಎಸ್.ಆರ್. | 23.08.1963 | ಪ.ಪಂ |
| 27 | ಪ.ಜಾ (ಮ) | ಸಿಂಘ ಬುದ್ದೆಪ್ಪ | 15.04.1964 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 28 | ಸಾ.ಅ (ಸಾ) | ದೇವಣ್ಣ ಸಿ. | 01.06.1967 | ಪ.ಪಂ. |
| 29 | 2ಎ(ಮ) | ರಾಮಚಂದ್ರಪ್ಪ ಎ. | 10.06.1968 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ -ಪ.ಜಾ. |
| 30 | ಸಾ.ಅ(ಮ) | ವಿಶ್ವನಾಥ | 12.04.1969 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ-ಪ.ಜಾ |
| 31 | 1 (ಮ) | ರಾಜು ಎಲ್.ಸಿ. | 24.04.1969 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ-ಪ.ಜಾ. |
| 32 | ಸಾ.ಅ (ಸಾ) | ಶಂಕರಮೂರ್ತಿ ಈ. | 18.06.1969 | ಪ.ಜಾ. |

| 1 | 2 | 3 | 4 | 5 |
|---|---|---|---|---|
| 33 | ಪ.ಜಾ.(ಸಾ) | ಡಾ: ಮಾದಯ್ಯ | 08.10.1969 | - |
| 34 | ಸಾ.ಅ (ಸಾ) | ದೇವರಾಜ ಹೆಚ್.ಡಿ. | 16.03.1970 | ಪ.ಜಾ |
| ಗೃಹವಿಜ್ಞಾನ (ಎನ್.ಇ.ಟಿ/ ಎಸ್.ಎಲ್.ಇ.ಟಿ) | | | | |
| 3 | ಪ.ಪಂ (ಸಾ) | ಬ್ಯಾಕ್‌ಲಾಗ್ | | |
| 4 | ಸಾ.ಅ (ಮ) | ಸುಚೇತಾ ಪ್ರಸಾದ | 05.05.1963 | 3ಬಿ |
| 5 | 1 (ಸಾ) | ರೇಬೆಕಾ ಜಾನ್ | 23.12.1965 | ಅರ್ಹ ಅಭ್ಯರ್ಥಿ ಲಭ್ಯವಿಲ್ಲ ಸಾ.ಅ. ತುಂಬಲಾಗಿದೆ |
| 6 | ಸಾ.ಅ. (ಸಾ) | ಶ್ರೀಲಕ್ಷ್ಮಿ | 14.07.1968 | |

ಮೇರಿಜಾಯ್ಸ್

ಸರ್ಕಾರದ ಉಪ ಕಾರ್ಯದರ್ಶಿ-4,

ಶಿಕ್ಷಣ ಇಲಾಖೆ.

**ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 180 ಡಿಸಿಇ 2003, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್, 2003ರ**

**ಅನುಬಂಧ-3**

ಸರ್ಕಾರಿ ಸೇವೆಯಲ್ಲಿ ಯು.ಜಿ.ಸಿ. ವೇತನ ಶ್ರೇಣಿಯಲ್ಲಿ ವಿಲೀನಗೊಳಿಸಲ್ಪಟ್ಟ ಎನ್.ಇ.ಟಿ./ಎಸ್.ಎಲ್.ಇ.ಟಿ. ಪಾಸು ಮಾಡದಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರೆಕಾಲಿಕ ಉಪನ್ಯಾಸಕರ ಪಟ್ಟಿ:

| ಕ್ರಮ ಸಂಖ್ಯೆ | ಮೀಸಲಾತಿ ವರ್ಗ | ಅರೆಕಾಲಿಕ ಉಪನ್ಯಾಸಕರ ಹೆಸರು | ಜನ್ಮ ದಿನಾಂಕ | ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಯಾವ ಗುಂಪಿನಿಂದ ತುಂಬಲಾಗಿದೆ |
|---|---|---|---|---|
| 1 | 2 | 3 | 4 | 5 |
| ಕನ್ನಡ (ನಾನ್ ಎನ್.ಇ.ಟಿ.) | | | | |
| 35 | 2 ಬಿ (ಮ) | ರೆಹಮಾನ್ ಅಲಿಖಾನ್ | 01.06.1955 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 37 | 2 ಎ (ಸಾ) | ಬಾಲಪ್ಪ ಎನ್. | 12.12.1962 | - |
| 38 | ಸಾ.ಅ (ಸಾ) | ಮಲ್ಲಿಕಾರ್ಜುನಪ್ಪ ಬಿ. | 06.07.1961 | 3 ಬಿ |
| 39 | ಪ.ಪಂ (ಮ) | ತಿಪ್ಪಯ್ಯ ಎಂ.ಓ. | 01.06.1956 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 40 | ಸಾ.ಅ. (ಸಾ) | ಜಯಣ್ಣಗೌಡ | 04.06.1962 | 3 ಎ |
| 41 | ಪ.ಜಾ (ಸಾ) | ಕೃಷ್ಣನಾಯಕ | 15.05.1963 | - |
| 42 | ಸಾ.ಅ. (ಸಾ) | ತಿಪ್ಪೇಶಪ್ಪ ಬಿ. | 25.03.1962 | 3 ಬಿ |
| ಆಂಗ್ಲಭಾಷೆ (ನಾನ್ ಎನ್.ಇ.ಟಿ.) | | | | |
| 29 | 2ಎ (ಮ) | ಗೌಸಿಯ ನಝುರತ್ ನಿಸಾರ್ | 03.02.1966 | 2ಬಿ |
| 30 | ಸಾ.ಅ.(ಮ) | ಚಿತ್ರಶೇಖರ ನಾಗೂರ | 05.06.1966 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 31 | 1 (ಮ) | ಶಂಕರಮೂರ್ತಿ | 14.01.1970 | ಪ.ಜಾತಿ (ಕ್ಯಾಟಗರಿ-1 ಮಹಿಳಾ ಮತ್ತು ಪುರುಷ ಅಭ್ಯರ್ಥಿ ಲಭ್ಯವಿಲ್ಲ) |
| ಹಿಂದಿ (ನಾನ್ ಎನ್.ಇ.ಟಿ) | | | | |
| 10 | ಸಾ.ಅ (ಮ) | ಇಂದುಮತಿ | 08.12.1951 | - |
| 11 | 2 ಬಿ (ಸಾ) | ಮಹಮ್ಮದ್ ಆಲಿ | 08.05.1966 | - |
| 12 | ಸಾ.ಅ (ಸಾ) | ನೀತಾ ಡಿ. ಬೋಸ್ಲೆ | 24.07.1965 | |
| 13 | 2ಎ (ಮ) | ಲತಾ ಎನ್. ಸರೋಡೆ | 20.08.1963 | - |
| 14 | ಸಾ.ಅ. (ಸಾ) | ಶರ್ಮಿಳಾ ಪಿ.ಎಂ. | 05.04.1966 | 3ಎ |
| 15 | ಪ.ಜಾ(ಸಾ) | ಬ್ಯಾಕ್‌ಲಾಗ್ | | |

| 1 | 2 | 3 | 4 | 5 |
|---|---|---|---|---|
| ಇತಿಹಾಸ (ನಾನ್ ಎನ್.ಇ.ಟಿ) | | | | |
| 17 | 3ಎ (ಸಾ) | ಕಾಶಿಕುಮಾರ್ ಪಿ.ಟಿ. | 24.02.1961 | - |
| 18 | ಸಾ.ಅ (ಸಾ) | ಶಶಿಧರ್ ಬಿ.ಆರ್. | 10.06.1962 | - |
| 19 | 3ಬಿ (ಸಾ) | ಮಲ್ಲನಗೌಡ ಆರ್. | 17.01.1963 | - |
| 20 | ಸಾ.ಅ (ಸಾ) | ಕೃಷ್ಣಮೂರ್ತಿ ಬಿ. | 22.07.1958 | - |
| 21 | 2ಎ (ಸಾ) | ಜವರಾಜಾಚಾರಿ | 01.12.1961 | - |
| 22 | ಸಾ.ಅ (ಸಾ) | ಶಿವಪ್ರಕಾಶ್ ಜಿ.ಎಸ್. | 18.05.1961 | - |
| 23 | ಪ.ಜಾ (ಸಾ) | ಹೊಸಮನಿ ಮಾಪಣ್ಣ | 18.05.1962 | - |
| 24 | ಸಾ.ಅ (ಮ) | ಗಾಯಿತ್ರಿ ಬಿ.ಪಿ. | 04.04.1967 | 3ಎ |
| 25 | 2ಎ (ಸಾ) | ಲಿಂಗಮೂರ್ತಿ ಹೆಚ್.ಬಿ. | 16.05.1962 | - |
| 26 | ಸಾ.ಅ (ಸಾ) | ನಿಂಗರಾಜು ಸಿ.ಆರ್. | 30.05.1961 | 3ಎ |
| 27 | ಪ.ಜಾ(ಮ) | ಸಾವಿತ್ರಿ | 21.04.1966 | - |
| 28 | ಸಾ.ಅ. (ಸಾ) | ಪ್ರಹ್ಲಾದ್ ಜಿ. | 01.06.1962 | I |
| 29 | 2ಎ (ಮ) | ಬಾಬು ಪತ್ತಾರ | 15.02.1963 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 30 | ಸಾ.ಅ (ಮ) | ಯಶೋಧ ಎಸ್. | 10.07.1965 | 3ಬಿ |
| 31 | 1(ಮ) | ನಾರಾಯಣಸ್ವಾಮಿ ಸಿ. | 29.07.1960 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 32 | ಸಾ.ಅ (ಸಾ) | ಲಿಂಗರಾಜು | 28.06.1962 | 3ಎ |
| 33 | ಪ.ಜಾ (ಸಾ) | ಅಮರನಾರಾಯಣ ಎಂ. | 01.08.1965 | - |
| 34 | ಸಾ.ಅ (ಸಾ) | ಭೀಮಣ್ಣ | 01.05.1964 | 2ಎ |
| 35 | 2ಬಿ (ಮ) | ಜಿಲಾನ್‌ಖಾನ್ ಸಿ.ಜಿ. | 01.10.1960 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 36 | ಸಾ.ಅ (ಮ) | ರಾಧಮ್ಮ ಕೆ.ಸಿ. | 01.07.1967 | 3ಎ |
| 37 | 2ಎ (ಸಾ) | ಇಂದ್ರೀಪಿ ಮಲ್ಲಿಕಾರ್ಜುನ | 01.06.1964 | - |
| 38 | ಸಾ.ಅ (ಸಾ) | ಈಶಪ್ಪ ಹೆಚ್. | 20.06.1960 | 3ಬಿ |
| 39 | ಪ.ಪಂ.(ಮ) | ರಾಮಾಂಜಿನಮ್ಮ ಪಿ.ಓ. | 30.08.1965 | - |
| 40 | ಸಾ.ಅ (ಸಾ) | ಪರಮೇಶ್ವರಪ್ಪ ಹೆಚ್.ಎಂ. | 06.04.1961 | 3ಬಿ |
| 41 | ಪ.ಜಾ(ಸಾ) | ಹೊಸಮನೆ ಭೀಮರಾಯ | 04.06.1967 | |
| 42 | ಸಾ.ಅ. (ಸಾ) | ದೊಡ್ಡಪ್ಪ | 01.06.1961 | - |
| 43 | 3ಬಿ (ಮ) | ತಿಮ್ಮಪ್ಪ ಜೆ. | 06.06.1962 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 44 | ಸಾ.ಅ (ಮ) | ವೀಣಾ ಜಿ.ಎಸ್. | 20.10.1967 | - |
| 45 | 2ಎ (ಸಾ) | ಕೃಷ್ಣಮೂರ್ತಿ ಟಿ.ವಿ. | 20.07.1961 | - |
| 46 | ಸಾ.ಅ. (ಸಾ) | ರಾಜು ಟಿ. | 25.12.1961 | 3ಎ |
| 47 | 3ಎ (ಮ) | ಲಿಂಗರಾಜು | 15.04.1964 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 48 | ಸಾ.ಅ. (ಸಾ) | ನಾಗಪ್ಪ ಎನ್. | 01.06.1962 | I |
| 49 | ಪ.ಜಾ (ಮ) | ಬಸವರಾಜು ಎಂ.ಆರ್. | 10.07.1961 | - |
| 50 | ಸಾ.ಅ (ಮ) | ಮೋರೆ ಬಿ.ಹೆಚ್. | 22.07.1963 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ-3ಬಿ |
| 51 | 2ಎ (ಮ) | ರಾಮಪ್ಪ ಹೆಚ್.ಕೆ. | 24.06.1961 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 52 | ಸಾ.ಅ (ಸಾ) | ತಿಮ್ಮಪ್ಪ ಬಿ. | 22.07.1964 | I |

| 1 | 2 | 3 | 4 | 5 |
|---|---|---|---|---|
| 53 | ಪ.ಜಾ. (ಸಾ) | ಪುಟ್ಟಬುದ್ದಿ | 30.07.1961 | |
| 54 | ಸಾ.ಅ. (ಸಾ) | ನಾಗಪ್ಪ ಜಿ. | 05.04.1965 | I |
| | | ಅರ್ಥಶಾಸ್ತ್ರ (ನಾನ್ ಎನ್.ಇ.ಟಿ) | | |
| 71 | ಪ.ಪಂ (ಸಾ) | ವೆಂಕೋಬ ಬಿರಾದಾರ | 01.06.1966 | - |
| 72 | ಸಾ.ಅ (ಸಾ) | ಪಾಟೀಲ್ ಪ್ರಕಾಶ್ ಪೊನ್ನಪ್ಪ | 04.11.1963 | - |
| 73 | 3ಎ (ಸಾ) | ಮುರಳಿ ಆನಂದ ಜಿ. | 05.04.1967 | - |
| 74 | ಸಾ.ಅ (ಸಾ) | ಶಿವರಾಜ ಸಾಗರ | 22.07.1959 | ಪ.ಜಾ. |
| 75 | ಪ.ಜಾ. (ಮ) | ಬಸವರಾಜು ಕೊಂಬಿನ | 15.07.1967 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 76 | ಸಾ.ಅ (ಮ) | ರಾಮಣ್ಣ ಎಂ. | 26.02.1962 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ-2ಎ |
| 77 | 2ಎ (ಮ) | ಸಿದ್ದಪ್ಪ ಕೆ. | 01.06.1958 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 78 | ಸಾ.ಅ (ಸಾ) | ದೊಡ್ಡಮನಿ ಶ್ರೀನಿವಾಸ ರಾವ್ | 05.05.1964 | 2ಎ |
| 79 | 1 (ಸಾ) | ಸುಣಗಾರ್ ಬಿ.ಬಿ. | 01.08.1963 | |
| 80 | ಸಾ.ಅ (ಸಾ) | ಕುಲಕರ್ಣಿ ಮಾಣಿಕ್‌ರಾವ್ | 01.06.1965 | |
| 81 | ಪ.ಜಾ(ಸಾ) | ಚನ್ನಬಸಪ್ಪ ಓಡಕರ್ | 28.06.1965 | |
| 82 | ಸಾ.ಅ. (ಸಾ) | ಮೌಲಿ ಪಾಟೀಲ್ ಭೀಮಣ್ಣ | 29.11.1965 | |
| 83 | 3ಬಿ (ಸಾ) | ಸೊಗಳದ ದೇವ ಸಿದ್ದಪ್ಪ | 01.06.1966 | |
| 84 | ಸಾ.ಅ(ಮ) | ಡೊಂಗ್ರ ಗಾಂವಕರ್ ಶರದ್ ಕೆ. | 11.11.1960 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 85 | 2ಎ (ಸಾ) | ತಿಳಗಂಜಿ ವಿ. ಈರಪ್ಪ | 01.06.1967 | |
| 86 | ಸಾ.ಅ (ಸಾ) | ಗಜ್ಜಿನಮನಿ ಮೋನಪ್ಪ ಎಸ್. | 01.04.1965 | I |
| 87 | 2ಬಿ (ಸಾ) | ರೆಹಮಾನ ಮೊಹಮ್ಮದ್ ಸಾಬ್ | 22.07.1967 | - |
| 88 | ಸಾ.ಅ (ಸಾ) | ರಾಜಶೇಖರ ಹೆಚ್. ಹಳ್ಳಿ | 22.05.1966 | ಪ.ಜಾ. |
| 89 | ಪ.ಜಾ (ಸಾ) | ಹನುಮಂತಪ್ಪ ಹೆಚ್. | 06.05.1966 | - |
| 90 | ಸಾ.ಅ (ಮ) | ಅನಿತ ಜೇನ್ ಜೆ. | 10.06.1968 | - |
| 91 | 2ಎ (ಸಾ) | ಆನಂದ ಎ. | 08.02.1968 | - |
| | | ರಾಜ್ಯಶಾಸ್ತ್ರ (ನಾನ್ ಎನ್.ಇ.ಟಿ) | | |
| 47 | 3ಎ (ಮ) | ಮಂಜಮ್ಮ ಬಿ.ಜಿ. | 07.07.1964 | - |
| 48 | ಸಾ.ಅ. (ಸಾ) | ರಾಠೋಡ್ ದೇವಿ ಚಂದ್ | 10.04.1963 | ಪ.ಜಾ. |
| 49 | ಪ.ಜಾ(ಮ) | ಚಂದ್ರಮ್ಮ ಎಸ್. | 15.07.1967 | - |
| 50 | ಸಾ.ಅ (ಮ) | ಜಯಶ್ರೀ ಕೆ. | 28.05.1967 | 2ಎ |
| 51 | 2ಎ (ಮ) | ಜಟ್ಟಪ್ಪ ಭೀಮರಾಯ ಡಿ. | 29.12.1964 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 52 | ಸಾ.ಅ. (ಸಾ) | ಶಂಕರಪ್ಪ ವಿ. | 17.08.1961 | - |
| 53 | ಪ.ಜಾ. (ಸಾ) | ದರೀಯಾ ನಾಯಕ್ | 20.07.1962 | - |
| 54 | ಸಾ.ಅ (ಸಾ) | ಕೃಷ್ಣಪ್ಪ ಕೆ.ಎನ್. | 18.12.1961 | - |
| 55 | 2ಎ (ಸಾ) | ಉಮಾಶಂಕರ ಆರ್. | 07.10.1963 | - |
| 56 | ಸಾ.ಅ. (ಮ) | ಲಕ್ಷ್ಮೀದೇವಮ್ಮ ಎನ್. | 01.06.1968 | 3ಎ |
| 57 | 1 (ಸಾ) | ಛತ್ರದ ಕೆ.ಹೆಚ್. | 01.06.1966 | - |
| 58 | ಸಾ.ಅ (ಸಾ) | ಪ್ರಕಾಶ ಹೆಚ್.ಆರ್. | 01.06.1962 | - |

| 1 | 2 | 3 | 4 | 5 |
|---|---|---|---|---|
| 59 | ಪ.ಜಾ (ಸಾ) | ನಾಗರಾಜಪ್ಪ ಎಲ್. | 15.01.1964 | - |
| 60 | ಸಾ.ಅ (ಸಾ) | ಲಕ್ಷ್ಮೀನಾರಾಯಣ ಬಿ. | 04.06.1962 | - |
| 61 | 2ಬಿ (ಸಾ) | ಅಮೀರ್ ಪಾಷ | 20.07.1966 | - |
| 62 | ಸಾ.ಅ.(ಸಾ) | ತ್ರಿಪುರಮೇಶ್ವರ ಎಂ. | 07.08.1965 | - |
| 63 | 2ಎ (ಸಾ) | ಜಯಪ್ಪ ಟಿ. | 01.07.1963 | - |
| 64 | ಸಾ.ಅ. (ಮ) | ಕೋಣೇಸರ ವೈ.ಎ. | 04.03.1966 | - |
| 65 | 3ಬಿ (ಸಾ) | ಚನ್ನಬಸಪ್ಪ ಡಿ.ಬಿ. | 30.04.1963 | - |
| 66 | ಸಾ.ಅ. (ಸಾ) | ಶಿವಣ್ಣ ಎಂ.ಎಸ್. | 02.07.1960 | - |
| 67 | ಪ.ಜಾ(ಸಾ) | ಹನುಮಂತ ದಾಸರ | 06.01.1965 | |
| 68 | ಸಾ.ಅ. (ಸಾ) | ರವಿಕಿರಣ್ ಹೆಚ್.ಎ. | 17.07.1964 | 3ಎ |
| 70 | ಸಾ.ಅ. (ಮ) | ಶಾರದಮ್ಮ ಡಿ. | 06.06.1966 | - |
| 71 | ಪ.ಪಂ.(ಸಾ) | ವೀರಭದ್ರಪ್ಪ ಟಿ. | 20.02.1968 | - |
| 73 | 3ಎ (ಸಾ) | ವೆಂಕಟೇಶಪ್ಪ ಎಸ್.ಎಂ. | 01.07.1964 | - |
| 74 | ಸಾ.ಅ.(ಸಾ) | ಈಶ್ವರಪ್ಪ ಕೆ.ಎಂ. | 19.07.1960 | 3ಬಿ |
| 75 | ಪ.ಜಾ(ಮ) | ಗೋವಿಂದ ನಾಯಕ್ ಬಿ. | 28.02.1962 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 76 | ಸಾ.ಅ. (ಮ) | ವನಜ | 01.06.1968 | - |
| 77 | 2ಎ (ಮ) | ನಾರಾಯಣ ಎಸ್. | 02.12.1965 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 78 | ಸಾ.ಅ (ಸಾ) | ಶಂಕರ್ ಪೋದ್ದಾರ್ | 02.09.1962 | |
| 79 | 1(ಸಾ) | ನೀರಡಗಿ ಯೆಂಕಪ್ಪ | 29.10.1963 | - |
| 80 | ಸಾ.ಅ(ಸಾ) | ಮಂಜುನಾಥ ಎ. | 24.06.1966 | - |
| **ಸಮಾಜಶಾಸ್ತ್ರ (ನಾನ್ ಎನ್.ಇ.ಟಿ)** | | | | |
| 26 | ಸಾ.ಅ(ಸಾ) | ಹೇಮಾ ಉತ್ತಯ್ಯ | 05.05.1959 | |
| 27 | ಪ.ಜಾ(ಮ) | ಶಾಂತಪ್ಪ ಬಿ. | 25.07.1959 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 28 | ಸಾ.ಅ. (ಸಾ) | ಮಹಮದ್ ಜಾಹಂಗೀರ್ | 12.01.1959 | 2ಬಿ |
| 29 | 2ಎ (ಮ) | ಕೇಶವಮೂರ್ತಿ ಟಿ.ಎನ್. | 24.05.1966 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 30 | ಸಾ.ಅ(ಮ) | ಸುಜಾತ ಸಿ.ಎನ್. | 12.09.1969 | - |
| 31 | 1 (ಮ) | ಅಜ್ಜಯ್ಯ ಹೆಚ್. | 30.12.1966 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| **ವಾಣಿಜ್ಯಶಾಸ್ತ್ರ (ನಾನ್ ಎನ್.ಇ.ಟಿ. ಮೊದಲನೇ ವೃತ್ತ)** | | | | |
| 64 | ಸಾ.ಅ (ಮ) | ಪೂರ್ಣಿಮ ಎಂ. | 25.05.1969 | - |
| 65 | 3ಬಿ (ಸಾ) | ಶಿವಪ್ಪ ಕೆ. | 01.06.1965 | - |
| 66 | ಸಾ.ಅ(ಸಾ) | ರಮೇಶ ಕೆ.ವಿ. | 14.08.1966 | |
| 67 | ಪ.ಜಾ(ಸಾ) | ಸುಬ್ಬಪ್ಪ ಕೆ. | 10.03.1971 | - |
| 68 | ಸಾ.ಅ(ಸಾ) | ಶಿವಯ್ಯ ಮುಪ್ಪಯ್ಯನ ಮಠ್ | 01.06.1965 | 3ಬಿ |
| 69 | 2ಎ (ಸಾ) | ರಮೇಶ್ ಬಿ.ಆರ್. | 20.06.1968 | - |
| 70 | ಸಾ.ಅ(ಮ) | ಆಶಾಲತಾ ಬಿ. | 20.11.1969 | - |
| 71 | ಪ.ಪಂ. (ಸಾ) | ಬ್ಯಾಕ್‌ಲಾಗ್ | | |
| 72 | ಸಾ.ಅ(ಸಾ) | ಪಾಟೀಲ್ ನಟರಾಜ | 01.06.1965 | - |
| 73 | 3ಎ (ಸಾ) | ರಮೇಶ್ ಎಂ.ಎಲ್. | 16.07.1965 | - |

| 1 | 2 | 3 | 4 | 5 |
|---|---|---|---|---|
| 74 | ಸಾ.ಅ(ಸಾ) | ವಾಸಪ್ಪ ಬಿ.ಹೆಚ್. | 05.06.1965 | 3ಎ |
| 75 | ಪ.ಜಾ (ಮ) | ಬ್ಯಾಕ್‌ಲಾಗ್ | | |
| 76 | ಸಾ.ಅ (ಮ) | ರೇಣುಕಾ ಬಾಯಿ ವಿ. | 26.11.1970 | 3ಬಿ |
| 77 | 2ಎ (ಮ) | ಹಿರಿಯಣ್ಣಯ್ಯ ಕೆ.ಸಿ. | 20.01.1962 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 78 | ಸಾ.ಅ (ಸಾ) | ಹಳೇಮನಿ ಶಿವಲಿಂಗಪ್ಪ ಎಸ್. | 03.01.1967 | |
| 79 | 1 (ಸಾ) | ಮಲ್ಲಿಕಾರ್ಜುನ ಗುಂಟಿ | 23.07.1967 | - |
| 80 | ಸಾ.ಅ(ಸಾ) | ಪ್ರಮೋದ ಗೊಂಚ್‌ಕರ್ ಕೆ. | 30.01.1961 | 3ಬಿ |
| 81 | ಪ.ಜಾ (ಸಾ) | ಬ್ಯಾಕ್‌ಲಾಗ್ | | |
| 82 | ಸಾ.ಅ (ಸಾ) | ಶಿವಾನಂದ ಹೆಚ್.ಡಿ. | 28.06.1964 | 3ಬಿ |
| 83 | 3ಬಿ (ಸಾ) | ರೆಡ್ಡಿ ವಿಶ್ವನಾಥ ರೆಡ್ಡಿ | 01.01.1965 | - |
| 84 | ಸಾ.ಅ(ಮ) | ರಾಜರಾಮ ಕೆ.ಎಲ್. | 07.10.1964 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 85 | 2ಎ (ಸಾ) | ಪೂಜಾರಿ ನಿಂಗಪ್ಪ | 16.06.1961 | - |
| 86 | ಸಾ.ಅ. (ಸಾ) | ದೇಶಪಾಂಡೆ ಪಿ.ಜಿ. | 01.05.1965 | - |
| 87 | 2ಬಿ (ಸಾ) | ಮುರವರ್ದನ ಕೆ. | 24.11.1965 | 3ಎ |
| 88 | ಸಾ.ಅ(ಸಾ) | ಲಕ್ಷ್ಮಿರಂಗನಾಥ ಆರ್. | 01.05.1965 | - |
| 89 | ಪ.ಜಾ (ಸಾ) | ಬ್ಯಾಕ್‌ಲಾಗ್ | | |
| 90 | ಸಾ.ಅ(ಮ) | ನಾಗರಾಜು | 01.06.1966 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ-3ಎ |
| 91 | 2ಎ (ಸಾ) | ರಾಜೇಶ ಎನ್. ನಾಯ್ಕ | 16.09.1965 | - |
| 92 | ಸಾ.ಅ (ಸಾ) | ರಮೇಶ್ ಎಂ.ಕೆ. | 04.06.1966 | - |
| 93 | ಪ.ಜಾ (ಮ) | ಬ್ಯಾಕ್‌ಲಾಗ್ | | |
| 94 | ಸಾ.ಅ(ಸಾ) | ಜವರೇಗೌಡ ಪಿ.ಕೆ. | 26.06.1966 | 3ಎ |
| 95 | 3ಎ (ಸಾ) | ರಂಗನಾಯಕಲು ಪಿ. | 03.07.1967 | |
| 96 | ಸಾ.ಅ(ಮ) | ಪದ್ಮನಾಭ ಕೆ. | 13.10.1966 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 97 | 2ಎ (ಮ) | ರಾಶಿನಕರ ಕೆ.ಎನ್. | 29.03.1966 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 98 | ಸಾ.ಅ(ಸಾ) | ಅಶೋಕ ಬಿ. ಕೆಂಚಾರೆಡ್ಡಿ | 15.07.1968 | 3ಬಿ |
| 99 | 3ಬಿ (ಮ) | ಕೊಳ್ಳಿ ಶಶಿಕಾಂತ | 15.08.1967 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 100 | ಸಾ.ಅ (ಸಾ) | ಶರಣಗೌಡ | 05.01.1961 | |
| 1 | ಪ.ಜಾ(ಸಾ) | ಬ್ಯಾಕ್‌ಲಾಗ್ | | - |
| 2 | ಸಾ.ಅ(ಸಾ) | ರಮಣಾರೆಡ್ಡಿ ಬಿ. | 03.05.1965 | - |
| 3 | ಪ.ಪಂ. (ಸಾ) | ಬ್ಯಾಕ್‌ಲಾಗ್ | | - |
| 4 | ಸಾ.ಅ(ಮ) | ನರಸಿಂಹಮೂರ್ತಿ | 21.06.1963 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 5 | 1 (ಸಾ) | ತಿಮ್ಮರೆಡ್ಡಿ ಮೇಟಿ | 08.07.1964 | ಅರ್ಹ ಅಭ್ಯರ್ಥಿ ಲಭ್ಯವಿಲ್ಲ 3ಎ ದಿಂದ ತುಂಬಲಾಗಿದೆ. |
| 6 | ಸಾ.ಅ (ಸಾ) | ರವಿಪ್ರಕಾಶ್ ಟಿ.ಬಿ. | 25.02.1964 | - |
| 7 | 2ಎ (ಸಾ) | ಸುರೇಶ್ ವಿ. | 18.05.1966 | - |
| 8 | ಸಾ.ಅ (ಸಾ) | ಗಂಗಾಧರಪ್ಪ ಕೆ. | 05.06.1961 | - |
| 9 | ಪ.ಜಾ (ಮ) | ಬ್ಯಾಕ್‌ಲಾಗ್ | | |

| 1 | 2 | 3 | 4 | 5 |
|---|---|---|---|---|
| 10 | ಸಾ.ಅ(ಮ) | ಶಿವಲಿಂಗಪ್ಪ ಹೆಚ್.ಟಿ. | 28.08.1964 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| 11 | 2ಬಿ (ಸಾ) | ನಟೇಶ್ ಎಸ್.ಎಂ. | 10.01.1966 | ಅರ್ಹ ಅಭ್ಯರ್ಥಿ ಲಭ್ಯವಿಲ್ಲ 3ಎ ದಿಂದ ತುಂಬಲಾಗಿದೆ |
| 12 | ಸಾ.ಅ (ಸಾ) | ಚನ್ನಯ್ಯ | 19.01.1965 | - |
| ಭೂಗೋಳಶಾಸ್ತ್ರ (ನಾನ್ ಎನ್.ಇ.ಟಿ.) | | | | |
| 10 | ಸಾ.ಅ (ಮ) | ಹೇಮಲತಾ ಹೆಚ್.ಎಂ. | 12.06.1969 | 3ಎ |
| 11 | 2ಬಿ (ಸಾ) | ಕೆಂಚನಗೌಡರ್ ಎಸ್.ಎಸ್. | 20.07.1961 | ಅಭ್ಯರ್ಥಿ ಲಭ್ಯವಿಲ್ಲ-3ಬಿ |
| 12 | ಸಾ.ಅ(ಸಾ) | ಬದನೇಕಾಯಿ ಎಂ.ಬಿ. | 12.03.1967 | - |
| 13 | 2ಎ(ಮ) | ಶಿವಯ್ಯ ಎ.ವಿ. | 22.07.1969 | ಮಹಿಳಾ ಅಭ್ಯರ್ಥಿ ಲಭ್ಯವಿಲ್ಲ |
| ಪತ್ರಿಕೋದ್ಯಮ (ನಾನ್ ಎನ್.ಇ.ಟಿ.) | | | | |
| 1 | ಪ.ಜಾ(ಸಾ) | ಅಭ್ಯರ್ಥಿ ಲಭ್ಯವಿಲ್ಲ | | |
| 2 | ಸಾ.ಅ(ಸಾ) | ಹರ್ಷಕುಮಾರ್ ಹೆಚ್.ಎಸ್. | 19.05.1968 | 3ಎ |
| ಎಲೆಕ್ಟ್ರಾನಿಕ್ಸ್ (ನಾನ್ ಎನ್.ಇ.ಟಿ.) | | | | |
| 3 | ಪ.ಪಂ.(ಸಾ) | ಬ್ಯಾಕ್‌ಲಾಗ್ | | |
| 5 | 1 (ಸಾ) | ರಾಜಕುಮಾರ್ ಟಿ. ಬೇಲೂರೆ | 14.11.1964 | ಅರ್ಹ ಅಭ್ಯರ್ಥಿ ಲಭ್ಯವಿಲ್ಲ ಸಾ.ಅ ದಿಂದ ತುಂಬಲಾಗಿದೆ |
| ಮೈಕ್ರೋಬಯಾಲಜಿ (ನಾನ್ ಎನ್.ಇ.ಟಿ.) | | | | |
| 1 | ಪ.ಜಾ.(ಸಾ) | ಬ್ಯಾಕ್‌ಲಾಗ್ | | |
| 2 | ಸಾ.ಅ(ಸಾ) | ರಾಜೇಶ್ವರ ರೆಡ್ಡಿ | 04.08.1961 | |
| ಗೃಹವಿಜ್ಞಾನ (ನಾನ್ ಎನ್.ಇ.ಟಿ.) | | | | |
| 7 | 2ಎ (ಸಾ) | ಛಾಯಾದೇವಿ | 26.04.1966 | ಅರ್ಹ ಅಭ್ಯರ್ಥಿ ಲಭ್ಯವಿಲ್ಲ ಸಾ.ಅ. ತುಂಬಲಾಗಿದೆ |

**ಮೇರಿಜಾಯ್ಸ್**
ಸರ್ಕಾರದ ಉಪ ಕಾರ್ಯದರ್ಶಿ-4,
ಶಿಕ್ಷಣ ಇಲಾಖೆ.

ಪಿ.ಆರ್. 1365

## ಬಂಡವಾಳ ಹಿಂತೆಗೆಯುವಿಕೆ ಹಾಗೂ ರಾಜ್ಯ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ರೇಷ್ಮೆ ಕೈಗಾರಿಕಾ ನಿಗಮದ ಸ್ವಯಂ ನಿವೃತ್ತಿ ಯೋಜನೆಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರಿ ಆದೇಶ ಸಂಖ್ಯೆ:ಡಿಡಿಪಿಇಆರ್ 61 ಎಆರ್‌ಯು 2003, ಬೆಂಗಳೂರು, ದಿನಾಂಕ: 28.08.2003
2. ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಎಫ್‌ಡಿ 1722/ಇಎಕ್ಸ್‌ಪಿ.1/2002, ದಿನಾಂಕ:14.10.2003.
3. ವ್ಯವಸ್ಥಾಪಕ ನಿರ್ದೇಶಕರು, ಕೆಎಸ್‌ಐಸಿ, ಇವರ ಪತ್ರ ಸಂಖ್ಯೆ: ಕೆಎಸ್‌ಐಸಿ/ಡಿಡಿಪಿಇಆರ್/ ವಿಆರ್‌ಎಸ್/2002-03, ದಿನಾಂಕ: 22.10.2003.
4. ರಾಜ್ಯ ಲೆಕ್ಕಪತ್ರ ಇಲಾಖೆ, ಪತ್ರ ಸಂಖ್ಯೆ: ರಾಲೆಪ/ಎ4/ತನಿಖೆ/ಕೆಎಸ್‌ಐಸಿ/24/2003 ದಿನಾಂಕ:22.10.2003

**ಪ್ರಸ್ತಾವನೆ:**

ಕರ್ನಾಟಕ ರೇಷ್ಮೆ ಕೈಗಾರಿಕಾ ನಿಗಮ ಸಂಸ್ಥೆಯ ಪುನರ್‌ನಿರ್ಮಾಣದ ಹಂತದಲ್ಲಿ ಸ್ಪನ್‌ಮಿಲ್ ಘಟಕ, ಚನ್ನಪಟ್ಟಣ ಮತ್ತು ಫಿಲಿಯೆಚರ್ ಘಟಕ, ಕನಕಪುರ, ಇವುಗಳನ್ನು ಮುಚ್ಚಿ ಅಲ್ಲಿನ ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಯೋಜನೆಯ ಪರಿಹಾರಗಳನ್ನು ನೀಡಲು ಸರ್ಕಾರವು ಮೇಲಿನ ಉಲ್ಲೇಖ(1)ರಲ್ಲಿ ಆದೇಶ ಹೊರಡಿಸಿತು. ಸ್ವಯಂ ನಿವೃತ್ತಿ ಯೋಜನೆಯ ಪರಿಹಾರಕ್ಕಾಗಿ ಅವಶ್ಯಕ ಹಣ ಬಿಡುಗಡೆಗೂ ಸಹ ಮೇಲಿನ ಉಲ್ಲೇಖದಲ್ಲಿ ಒಪ್ಪಲಾಗಿದ್ದಿತು.

ಆರ್ಥಿಕ ಇಲಾಖೆ ಉಲ್ಲೇಖ(2)ರಲ್ಲಿ ತನ್ನ ಅನಧಿಕೃತ ಟಿಪ್ಪಣಿಯಲ್ಲಿ ಸ್ವಯಂ ನಿವೃತ್ತಿ ಯೋಜನೆಯ ಪರಿಹಾರಗಳನ್ನು ಬಿಡುಗಡೆ ಮಾಡುವ ಮುನ್ನ ಸದರಿ ಪರಿಹಾರ ವಂತಿಗೆಗಳ ಪೂರ್ವ ತನಿಖೆಯನ್ನು ರಾಜ್ಯ ಲೆಕ್ಕಪತ್ರ ಇಲಾಖೆಯ ಮುಖಾಂತರ ನಡೆಸಿ ಬಿಡುಗಡೆಗಾಗಿ ವರದಿ ಸಲ್ಲಿಸಲು ಹೇಳಿರುತ್ತಾರೆ. ಉಲ್ಲೇಖ(3)ರನ್ವಯ ವ್ಯವಸ್ಥಾಪಕ ನಿರ್ದೇಶಕರು, ಕೆಎಸ್‌ಐಸಿರವರು ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ಲೆಕ್ಕ ಪೂರ್ವ ತನಿಖೆಯಾದ ವಿವರವನ್ನು ಉಲ್ಲೇಖಿಸಿ ಚನ್ನಪಟ್ಟಣ ಮತ್ತು ಕನಕಪುರ ಘಟಕಗಳ ಒಟ್ಟು 292 ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ

ಯೋಜನೆಯನ್ನು ವಿಸ್ತರಿಸಲು ಸಾಧ್ಯವಾಗುವಂತೆ ರೂ. 7,94,85,124 ಗಳನ್ನು ಬಿಡುಗಡೆ ಮಾಡಲು ಉಲ್ಲೇಖ (3)ರಲ್ಲಿ ಕೋರಿದ್ದರು. ಆರ್ಥಿಕ ಇಲಾಖೆಯು ಸಂಖ್ಯೆ: ಡಿಡಿಪಿಇಆರ್ 61 ಎಆರ್‌ಯು 2003 (part-II) ಕಡತದಲ್ಲಿ ಉಲ್ಲೇಖ ಸಂಖ್ಯೆ: ಎಫ್‌ಡಿ 1820 ಇಎಕ್ಸ್‌ಪಿ-1 2003 ದಿನಾಂಕ:27.10.2003ರಂದು ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ಪೂರ್ವ ತನಿಖೆ ವಿವರಗಳನ್ನು ಪರಿಶೀಲಿಸಿದ ನಂತರ ಕನಕಪುರ ಮತ್ತು ಚನ್ನಪಟ್ಟಣ ಘಟಕಗಳ ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಯೋಜನೆಯ ಪರಿಹಾರಗಳಿಗಾಗಿ ರೂ. 795 ಲಕ್ಷಗಳನ್ನು ಬಿಡುಗಡೆ ಮಾಡಲು ಸಹಮತಿಸಿದ್ದಾರೆ.

ಹಾಗಾಗಿ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಡಿಡಿಪಿಇಆರ್ 61 ಎಆರ್‌ಯು 2003, ಬೆಂಗಳೂರು, ದಿನಾಂಕ:27ನೇ ಅಕ್ಟೋಬರ್, 2003**

ಕರ್ನಾಟಕ ರೇಷ್ಮೆ ಕೈಗಾರಿಕಾ ನಿಗಮ ಸಂಸ್ಥೆಯ ಕನಕಪುರ ಮತ್ತು ಚನ್ನಪಟ್ಟಣ ಘಟಕಗಳ ಸ್ವಯಂ ನಿವೃತ್ತಿ ಯೋಜನೆ ಪಡೆದ 292 ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಪರಿಹಾರಗಳನ್ನು ವಿತರಿಸಲು ಸಾಧ್ಯವಾಗುವಂತೆ ರೂ. 795 ಲಕ್ಷಗಳನ್ನು (ರೂಪಾಯಿ ಏಳು ನೂರ ತೊಂಬತ್ತೈದು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲು ಆದೇಶಿಸಿದೆ. ಈ ಮೊತ್ತವನ್ನು 2002-03ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 6852-02-190-4-02 ಸ್ಟೇಟ್ ರಿನೀವಲ್ ಫಂಡ್‌ನಿಂದ ಬಿಡುಗಡೆ ಮಾಡಲಾಗಿದೆ.

ಮೇಲಿನ ಹಣವನ್ನು 292 ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಯೋಜನೆಯ ಪರಿಹಾರಗಳನ್ನು ವಿತರಿಸುವ ಸಲುವಾಗಿಯೇ ಉಪಯೋಗಿಸತಕ್ಕದ್ದು. ಈ ಹಣವನ್ನು ಆಯುಕ್ತರು, ಕೈಗಾರಿಕಾ ಅಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆ, ಇವರ ಮೇಲುರುಜು ಪಡೆದು ರಾಜ್ಯ ಹುಜೂರ್ ಖಜಾನೆಯಿಂದ ಡ್ರಾ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1820 ಇಎಕ್ಸ್‌ಪಿ-1 2003 ಎಫ್‌ಡಿ (ಇಎಕ್ಸ್‌ಪಿ-1) ದಿನಾಂಕ: 27.10.2003ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಎಸ್. ವಿಶ್ವನಾಥ್**

ಜಂಟಿ ನಿರ್ದೇಶಕರು (ಪಿಇಆರ್),

ಬಂಡವಾಳ ಹಿಂತೆಗೆಯುವಿಕೆ ಹಾಗೂ ರಾಜ್ಯ ಸಾರ್ವಜನಿಕ

ಉದ್ದಿಮೆಗಳ ಸುಧಾರಣೆ ಇಲಾಖೆ.

ಪಿ.ಆರ್. 1396

## ಕಂದಾಯ ಸಚಿವಾಲಯ

**ವಿಷಯ:** ಒಕ್ಕಲಿಗರ ಸಾರ್ವಜನಿಕ ವಿದ್ಯಾರ್ಥಿನಿಲಯ, ಚನ್ನಪಟ್ಟಣ ಈ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 40 ಮುನೊಸೊ 2000, ದಿನಾಂಕ:13.10.2000.
2. ಆಡಳಿತಾಧಿಕಾರಿಗಳು, ಒಕ್ಕಲಿಗರ ಸಾರ್ವಜನಿಕ ವಿದ್ಯಾರ್ಥಿನಿಲಯ, ಚನ್ನಪಟ್ಟಣರವರ ವರದಿ ಸಂಖ್ಯೆ: ಎಡಿಎಂ:ಸಿಆರ್:1:2003-04, ದಿನಾಂಕ:24.09.2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಸಾರ್ವಜನಿಕ ವಿದ್ಯಾರ್ಥಿ ನಿಲಯ, ಚನ್ನಪಟ್ಟಣ ಈ ಸಂಸ್ಥೆಗೆ, ಆಡಳಿತಾಧಿಕಾರಿ ನೇಮಕ ಮಾಡಲಾಯಿತು ಹಾಗೂ ಕಾಲಕಾಲಕ್ಕೆ ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸಲಾಗಿದೆ. ಓದಲಾದ (2)ರಲ್ಲಿ ಆಡಳಿತಾಧಿಕಾರಿಯವರು ವರದಿ ನೀಡುತ್ತಾ, ನ್ಯಾಯಾಲಯದ ಆದೇಶದಂತೆ, ಚುನಾವಣೆ ನಡೆಸಬೇಕಾಗಿದೆ ಅದರ ಪ್ರಕಾರ ಚುನಾವಣೆಯನ್ನು ದಿನಾಂಕ:19.10.2003ರಂದು ನಿರ್ಧರಿಸಲಾಗಿದೆ. ಆದ್ದರಿಂದ ಆಡಳಿತಾಧಿಕಾರಿ ಅವಧಿ ವಿಸ್ತರಿಸಲು ಕೋರಿದ್ದಾರೆ.

ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ:02.10.2003ರವರೆಗೆ ಈ ಮೊದಲು ವಿಸ್ತರಿಸಲಾಗಿದೆ. ಸಂಸ್ಥೆಗೆ ಚುನಾವಣೆ ನಡೆಸಬೇಕಾಗಿರುವುದರಿಂದ ಆಡಳಿತಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 40 ಮುನೊಸೊ 2000, ಬೆಂಗಳೂರು, ದಿನಾಂಕ:27ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ಕಾಯ್ದೆ 1960ರ ಕಲಂ 27ರ ಪ್ರಕಾರ ಒಕ್ಕಲಿಗರ ಸಾರ್ವಜನಿಕ ವಿದ್ಯಾರ್ಥಿನಿಲಯ, ಚನ್ನಪಟ್ಟಣ ಈ ಸಂಸ್ಥೆಗೆ ನೇಮಕವಾಗಿದ್ದ, ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ:03.10.2003ರಿಂದ 2 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪೀಠಾಧಿಕಾರಿ,

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 1397

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯದಲ್ಲಿ ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ನಡೆಸುವ ಯುವ ಸಂಸತ್ ಸ್ಪರ್ಧೆ (ತಿದ್ದುಪಡಿ) ನಿಯಮಗಳು, 2003.

**ಓದಲಾಗಿದೆ:** 1. ದಿನಾಂಕ:09.10.2000ರ ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 6 ಸಂವ್ಯವಿ 97.

2. ದಿನಾಂಕ: 11.11.2002ರ ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 150 ಆಡಳಿತ 2002.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ: 09.10.2000ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ನಡೆಸುವ ಯುವ ಸಂಸತ್ ಸ್ಪರ್ಧೆ ನಿಯಮಗಳು 1999ನ್ನು ಹೊರಡಿಸಲಾಗಿದೆ.

ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ: 11.11.2002ರ ಸರ್ಕಾರಿ ಆದೇಶದಲ್ಲಿ 2002-03ನೇ ಸಾಲಿನ ವಿಷಯ ಸಮಿತಿಯ ವರದಿಯ ಶಿಫಾರಸ್ಸಿನಂತೆ, ಜಿಲ್ಲಾ ಮಟ್ಟದ ಹಾಗೂ ರಾಜ್ಯ ಮಟ್ಟದ ಯುವ ಸಂಸತ್ ಸ್ಪರ್ಧೆಗಳ ತೀರ್ಪುಗಾರರ ಸಮಿತಿಯಲ್ಲಿ ಸ್ಥಳೀಯ ಶಾಸಕರನ್ನು ನಿಯೋಜಿಸಲು 12ನೇ ನಿಯಮಕ್ಕೆ ಹಾಗೂ ಇತರೆ ನಿಯಮಗಳಲ್ಲಿ ಸೂಕ್ತ ತಿದ್ದುಪಡಿಗಳನ್ನು ಮಾಡಿ ಕರ್ನಾಟಕ ರಾಜ್ಯದಲ್ಲಿ ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ನಡೆಸುವ ಯುವ ಸಂಸತ್ ಸ್ಪರ್ಧೆ (ತಿದ್ದುಪಡಿ) ನಿಯಮಗಳು, 2002ನ್ನು ಹೊರಡಿಸಲಾಗಿದೆ.

ಹಿಂದಿನ ಸಾಲುಗಳಲ್ಲಿ ನಡೆಸಿದ ಸ್ಪರ್ಧೆಗಳ ಅನುಭವದಿಂದ ಜಿಲ್ಲಾ ಮಟ್ಟದಲ್ಲಿ ಅತಿ ಹೆಚ್ಚು ಅಂಕ ಗಳಿಸಿದ ನಾಲ್ಕು ತಂಡಗಳನ್ನು ರಾಜ್ಯ ಮಟ್ಟದ ಸ್ಪರ್ಧೆಗಳಲ್ಲಿ ಭಾಗವಹಿಸುವಂತೆ ವ್ಯವಸ್ಥೆ ಮಾಡುವುದು ಮತ್ತು ಅವುಗಳ ನಡುವೆ ಉತ್ತಮ ಮತ್ತು ಅತ್ಯುತ್ತಮ ತಂಡವನ್ನು ಆರಿಸಿ ಪುರಸ್ಕರಿಸುವುದು ಹಾಗೂ ಅತ್ಯುತ್ತಮ ಮತ್ತು ಉತ್ತಮ ವೈಯಕ್ತಿಕ ಪ್ರತಿಭೆಗಳಿಗೆ ಪುರಸ್ಕಾರ ನೀಡುವುದು ಸೂಕ್ತವೆಂದು ಪರಿಗಣಿಸಲಾಗಿದೆ ಹಾಗೂ ಉದ್ದೇಶಿತ ಬದಲಾವಣೆಗಳನ್ನು ತರಲು ನಿಯಮಗಳಿಗೆ ಸೂಕ್ತ ತಿದ್ದುಪಡಿ ಮಾಡಲು ಉದ್ದೇಶಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಂವ್ಯಶಾಇ 59 ಸಂವ್ಯವಿ 2003, ಬೆಂಗಳೂರು, ದಿನಾಂಕ: 28ನೇ ಅಕ್ಟೋಬರ್, 2003**

ಮೇಲೆ ಹೇಳಿರುವ ಕಾರಣಗಳಿಂದ ಕರ್ನಾಟಕ ರಾಜ್ಯದಲ್ಲಿ ಪ್ರೌಢಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ನಡೆಸುವ ಯುವ ಸಂಸತ್ ಸ್ಪರ್ಧೆ ನಿಯಮಗಳು, 1999ಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಇರುವಂತೆ ತಿದ್ದುಪಡಿಗಳನ್ನು ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ದಕ್ಷಿಣಾಮೂರ್ತಿ**

ಸರ್ಕಾರದ ಕಾರ್ಯದರ್ಶಿ (ಪ್ರಭಾರ),

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

**ಅನುಬಂಧ**

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ:** (1) ಈ ನಿಯಮಗಳನ್ನು ಕರ್ನಾಟಕ ರಾಜ್ಯದಲ್ಲಿ ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ನಡೆಸುವ ಯುವ ಸಂಸತ್ ಸ್ಪರ್ಧೆ (ತಿದ್ದುಪಡಿ) ನಿಯಮಗಳು, 2003 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ತಕ್ಷಣದಿಂದ ಜಾರಿಗೆ ಬರತಕ್ಕದ್ದು.

**2. 4ನೇ ನಿಯಮದ ತಿದ್ದುಪಡಿ:** ಕರ್ನಾಟಕ ರಾಜ್ಯದಲ್ಲಿ ಪ್ರೌಢ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ನಡೆಸುವ ಯುವ ಸಂಸತ್ ಸ್ಪರ್ಧೆ ನಿಯಮಗಳು, 1999 (ಇದರಲ್ಲಿ ಇನ್ನು ಮುಂದೆ ಮೂಲ ನಿಯಮವೆಂದು ಉಲ್ಲೇಖಿಸಲಾಗಿದೆ)ರ 4ನೇ ನಿಯಮದಲ್ಲಿ,-

(ಅ) (2)ನೇ ಉಪನಿಯಮದಲ್ಲಿ "ಅಗತ್ಯವಾದಷ್ಟು ಸಂಖ್ಯೆಯಲ್ಲಿ ಭಾಗವಹಿಸುವವರನ್ನು" ಎಂಬ ಪದಗಳ ತರುವಾಯ "ನಿಯಮ 6ಕ್ಕೆ ಒಳಪಟ್ಟು ತಾಲ್ಲೂಕುವಾರು ಅಥವಾ ಯೋಗ್ಯವಾದಂತೆ ಶಾಲಾವಾರು ತಂಡಗಳಾಗಿ ವಿಂಗಡಿಸಿ" ಎಂಬ ಪದಗಳನ್ನು ಸೇರಿಸತಕ್ಕದ್ದು.

(ಆ) (3)ನೇ ಉಪ ನಿಯಮದಲ್ಲಿ "ಪ್ರಥಮ ಮತ್ತು ದ್ವಿತೀಯ ಬಹುಮಾನಗಳನ್ನು ಪಡೆದವರು ರಾಜ್ಯ ಮಟ್ಟದ ಸ್ಪರ್ಧೆಯ ಭಾಗಿಗಳಾಗಿರತಕ್ಕದ್ದು" ಎಂಬ ಪದಗಳಿಗೆ "ಪ್ರಥಮ ಸ್ಥಾನವನ್ನು ಪಡೆದ ತಂಡ ರಾಜ್ಯ ಮಟ್ಟದ ಸ್ಪರ್ಧೆಯಲ್ಲಿ ಭಾಗವಹಿಸಲು ಅರ್ಹತೆಯುಳ್ಳದ್ದಾಗಿರತಕ್ಕದ್ದು ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

**3. 6ನೇ ನಿಯಮದ ತಿದ್ದುಪಡಿ:** ಮೂಲ ನಿಯಮದ 6ನೇ ನಿಯಮದ (2)ನೇ ಉಪ ನಿಯಮದಲ್ಲಿ "ಇದರಲ್ಲಿ ಮೂವತ್ತು ನಿಮಿಷಗಳ ಅವಧಿಯನ್ನು ಪ್ರಶ್ನೆಗಳಿಗೆ ಕಾಯ್ದಿರಿಸತಕ್ಕದ್ದು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**4. 7ನೇ ನಿಯಮದ ತಿದ್ದುಪಡಿ:** ಮೂಲ ನಿಯಮದ 7ನೇ ನಿಯಮದಲ್ಲಿ "ಪ್ರತಿ ಸಂಸ್ಥೆಗೂ" ಎಂಬ ಪದಗಳಿಗೆ ಬದಲಾಗಿ "ಪ್ರತಿ ತಂಡವೂ" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

**5. 11ನೇ ನಿಯಮದ ತಿದ್ದುಪಡಿ:** ಮೂಲ ನಿಯಮದ 11ನೇ ನಿಯಮದಲ್ಲಿ,-

(ಅ) (1)ನೇ ಉಪನಿಯಮದಲ್ಲಿ "ಪ್ರಮಾಣ ಪತ್ರವನ್ನು" ಎಂಬ ಪದಗಳ ತರುವಾಯ "ಹಾಗೂ ಜಿಲ್ಲಾ ಮಟ್ಟದ ಸ್ಪರ್ಧೆಯಲ್ಲಿ ಭಾಗವಹಿಸಿ ಅತ್ಯುತ್ತಮ ಪ್ರತಿಭೆಯನ್ನು ಮೆರೆದ ಇಬ್ಬರು ವಿದ್ಯಾರ್ಥಿಗಳಿಗೆ ವೈಯಕ್ತಿಕ ಬಹುಮಾನ ಹಾಗೂ ಪ್ರಮಾಣ ಪತ್ರಗಳನ್ನು" ಎಂಬ ಪದಗಳನ್ನು ಸೇರಿಸತಕ್ಕದ್ದು.

(ಆ) (2)ನೇ ಉಪ ನಿಯಮದಲ್ಲಿ "ಜಿಲ್ಲಾಮಟ್ಟದ ಸ್ಪರ್ಧೆಯಲ್ಲಿ ಪ್ರಥಮ ಮತ್ತು ದ್ವಿತೀಯ ಸ್ಥಾನಗಳಿಸಿ ರಾಜ್ಯ ಮಟ್ಟದ ಸ್ಪರ್ಧೆಗೆ ಆಯ್ಕೆಯಾಗಿರುವ ವಿದ್ಯಾರ್ಥಿಗಳಿಗೆ ವೈಯಕ್ತಿಕ ಬಹುಮಾನ ಹಾಗೂ" ಎಂಬ ಪದಗಳಿಗೆ "ರಾಜ್ಯ ಮಟ್ಟದ ಸ್ಪರ್ಧೆಯಲ್ಲಿ ಪ್ರಥಮ ಮತ್ತು ದ್ವಿತೀಯ ಸ್ಥಾನ ಪಡೆದ ತಂಡಗಳಿಗೆ ಫಲಕಗಳನ್ನು ಮತ್ತು ಪ್ರಮಾಣ ಪತ್ರಗಳನ್ನು ಹಾಗೂ ಭಾಗವಹಿಸಿದ ಪ್ರತಿಯೊಬ್ಬ ವಿದ್ಯಾರ್ಥಿಗೂ" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

(ಇ) (3)ನೇ ಉಪನಿಯಮ ಹಾಗೂ (4)ನೇ ಉಪನಿಯಮಗಳನ್ನು ಬಿಟ್ಟುಬಿಡತಕ್ಕದ್ದು.

**6. 12ನೇ ನಿಯಮದ ತಿದ್ದುಪಡಿ:** ಮೂಲ ನಿಯಮದ 12ನೇ ನಿಯಮದ (2)ನೇ ಉಪ ನಿಯಮದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ,-

"(3) ತೀರ್ಪುಗಾರರ ಸಮಿತಿಯು ನೀಡುವ ತೀರ್ಪುಗಳು ಸಮಿತಿಯ ಯಾವೊಬ್ಬ ಸದಸ್ಯನ ಅನುಪಸ್ಥಿತಿಯ ಕಾರಣದಿಂದ ಅನೂರ್ಜಿತವಾಗತಕ್ಕದ್ದಲ್ಲ."

**7. 13ನೇ ನಿಯಮದ ತಿದ್ದುಪಡಿ:** ಮೂಲ ನಿಯಮದ 13ನೇ ನಿಯಮದಲ್ಲಿ,-

(ಅ) (1)ನೇ ಉಪ ನಿಯಮವೆಂದು ಕ್ರಮ ಸಂಖ್ಯೆಗೊಳಿಸತಕ್ಕದ್ದು. ಹೀಗೆ ಕ್ರಮ ಸಂಖ್ಯೆಗೊಳಿಸಿದ (1)ನೇ ಉಪ ನಿಯಮದಲ್ಲಿ "ಸ್ಪರ್ಧೆಯಲ್ಲಿ" ಎಂಬ ಪದಕ್ಕೆ "ಸ್ಪರ್ಧೆಗಳಲ್ಲಿ ತಂಡದ" ಎಂಬ ಪದಗಳನ್ನು ಹಾಗೂ "ಅಂಶಗಳನ್ನು ಗಮನದಲ್ಲಿಟ್ಟುಕೊಂಡಿರಬೇಕು" ಎಂಬ ಪದಗಳಿಗೆ "ಮಾನದಂಡವನ್ನು ಅನುಸರಿಸತಕ್ಕದ್ದು" ಎಂಬ ಪದಗಳನ್ನು ಅನುಕ್ರಮವಾಗಿ ಪ್ರತ್ಯಾಯೋಜಿಸತಕ್ಕದ್ದು.

(ಆ) (1)ನೇ ಉಪನಿಯಮದ ತರುವಾಯ, ಈ ಕೆಳಗಿನದನ್ನು ಪ್ರತ್ಯಾಯೋಜಿಸತಕ್ಕದ್ದು, ಅಂದರೆ,-

"(2) ಸ್ಪರ್ಧೆಗಳಲ್ಲಿ ವಿದ್ಯಾರ್ಥಿಗಳ ವೈಯಕ್ತಿಕ ಪ್ರತಿಭೆಯನ್ನು ನಿರ್ಧರಿಸುವಾಗ ಈ ಮುಂದಿನ ಮಾನದಂಡವನ್ನು ಅನುಸರಿಸತಕ್ಕದ್ದು.

| | | ಅಂಕಗಳು |
|---|---|---|
| 1. | ಪೋಷಾಕು ಮತ್ತು ಶೈಲಿ | 10 |
| 2. | ಶಿಸ್ತು ಮತ್ತು ಕಾರ್ಯಪಾಲನೆ | 10 |
| 3. | ಕಲಾಪ ನಿಯಮಗಳ ಬಗೆಗಿನ ಜ್ಞಾನ | 20 |
| 4. | ಚರ್ಚಾ ವಿಷಯಗಳ ಬಗೆಗಿನ ಜ್ಞಾನ | 30 |
| 5. | ಭಾಷೆ ಮತ್ತು ಅಭಿವ್ಯಕ್ತಿ | 20 |
| 6. | ಸ್ವಜನಾತ್ಮಕತೆ | 10 |
| | ಒಟ್ಟು | 100 |

**ಜಿ. ದಕ್ಷಿಣಾಮೂರ್ತಿ**
ಸರ್ಕಾರದ ಕಾರ್ಯದರ್ಶಿ (ಪ್ರಭಾರ),
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್. 1398

## ಕಾನೂನು ಸಚಿವಾಲಯ

**ವಿಷಯ:** ಪ್ರಥಮ ರಾಷ್ಟ್ರೀಯ ನ್ಯಾಯಾಂಗ ವೇತನ ಆಯೋಗದ ವೇತನ ಶ್ರೇಣಿಗಳ ಅನುಷ್ಠಾನದಿಂದಾಗಿ ಹೆಚ್ಚುವರಿ ವೆಚ್ಚವನ್ನು ಭರಿಸಲು ಕರ್ನಾಟಕ ಜುಡಿಷಿಯಲ್ ಅಕಾಡಮಿಗೆ ಹಣ ಬಿಡುಗಡೆ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕರ್ನಾಟಕ ಜುಡಿಷಿಯಲ್ ಅಕಾಡಮಿ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೆಜೆಎ-564:2003, ದಿನಾಂಕ: 07.08.2003.

**ಪ್ರಸ್ತಾವನೆ:**

ಕರ್ನಾಟಕ ಜುಡಿಷಿಯಲ್ ಅಕಾಡಮಿಯ ನಿರ್ದೇಶಕರು, ಮೇಲೆ ಓದಲಾದ ದಿನಾಂಕ: 07.08.2003ರ ಪತ್ರದಲ್ಲಿ ಪ್ರಥಮ ರಾಷ್ಟ್ರೀಯ ನ್ಯಾಯಾಂಗ ವೇತನ ಆಯೋಗದ ಶಿಫಾರಸ್ಸಿನ ಅನ್ವಯ ಕರ್ನಾಟಕ ರಾಜ್ಯದ ಅಧೀನ ನ್ಯಾಯಾಲಯದ ನ್ಯಾಯಾಂಗ ಅಧಿಕಾರಿಗಳಿಗೆ ಪರಿಷ್ಕೃತ ವೇತನ ಮತ್ತು ಇತರೆ ಭತ್ಯೆಗಳನ್ನು ಸರ್ಕಾರದ ಆದೇಶ ಸಂಖ್ಯೆ: ಲಾ 124 ಎಲ್ಎಸಿ 1997 ದಿನಾಂಕ: 07.05.2003ರಲ್ಲಿ ಅನುಷ್ಠಾನಗೊಳಿಸಿದ್ದರಿಂದ ಉಂಟಾಗುವ ವೇತನ ಮತ್ತು ಇತರೆ ಭತ್ಯೆಗಳ ವ್ಯತ್ಯಾಸದ ಬಾಕಿ ಮೊತ್ತವನ್ನು ಪಾವತಿಸಲು ರೂ. 20.00 ಲಕ್ಷಗಳ ಹೆಚ್ಚುವರಿ ಹಣವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ನೀಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 161 ಎಲ್ಎಸಿ 2003, ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್, 2003**

ಸರ್ಕಾರದ ಆದೇಶ ಸಂಖ್ಯೆ: ಲಾ 124 ಎಲ್ಎಸಿ 1997 ದಿನಾಂಕ: 07.05.2003ರ ಕಂಡಿಕೆ 5.3ರಲ್ಲಿ ಆದೇಶಿಸಿರುವಂತೆ ಪ್ರಥಮ ರಾಷ್ಟ್ರೀಯ ನ್ಯಾಯಾಂಗ ವೇತನ ಆಯೋಗದ ಶಿಫಾರಸ್ಸಿನನ್ವಯ ಕರ್ನಾಟಕ ರಾಜ್ಯದ ಅಧೀನ ನ್ಯಾಯಾಲಯದ ನ್ಯಾಯಾಂಗ ಅಧಿಕಾರಿಗಳಿಗೆ ಪರಿಷ್ಕೃತ ವೇತನ ಅನುಷ್ಠಾನದಿಂದಾಗಿ ಉಂಟಾಗುವ ವೇತನ ಮತ್ತು ಇತರೆ ಭತ್ಯೆಗಳ ವ್ಯತ್ಯಾಸದ ಬಾಕಿ ಮೊತ್ತವನ್ನು ಪಾವತಿಸಲು ರೂ. 20.00 (ರೂಪಾಯಿಗಳು ಇಪ್ಪತ್ತು ಲಕ್ಷ ಮಾತ್ರ) ಲಕ್ಷಗಳ ಹೆಚ್ಚುವರಿ ಹಣವನ್ನು ನೀಡಲು ಸಹಮತಿಸಿದೆ. ಹಾಗೂ ಇದಕ್ಕಾಗಿ ತಗಲುವ ವೆಚ್ಚವನ್ನು 2003-2004ನೇ ಸಾಲಿನಲ್ಲಿ ಇಲಾಖೆಗೆ ಒದಗಿಸಲಾದ ಅನುದಾನದ ಮಿತಿಯಲ್ಲಿಯೇ ಮೊದಲು ಉಳಿತಾಯ ಗುರುತಿಸಿ, ಮರುಹೊಂದಾಣಿಕೆ ಮೂಲಕ ವೆಚ್ಚ ಭರಿಸಲು ಕೋರಿದೆ. ಇದು ಒಂದು ಪಕ್ಷ ಸಾಧ್ಯವಾಗದಿದ್ದಲ್ಲಿ ಇದನ್ನು ಮುಂದಿನ ಪೂರಕ ಅಂದಾಜಿನಲ್ಲಿ ಸೇರಿಸುವ ಬಗ್ಗೆ ನಿಗದಿತ ಅವಧಿಯೊಳಗೆ ಪ್ರಸ್ತಾವನೆಯನ್ನು ಸಲ್ಲಿಸಿ ಸಕ್ರಮಗೊಳಿಸಿಕೊಳ್ಳಬೇಕೆಂದು ತಿಳಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1741 ವೆಚ್ಚ-5: 2003, ದಿನಾಂಕ: 18.10.2003ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಿಕ್ಕಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ (ಆಡಳಿತ-1).

ಪಿ.ಆರ್. 1399

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಮಹಮದ್ ಸರ್ವರ್ ಬಾಲವಿಕಾಸ ಯೋಜನಾಧಿಕಾರಿ ಅಂಕೋಲ ತಾಲ್ಲೂಕ್ ಇವರ ವಿರುದ್ಧ ಮರು ಇಲಾಖಾ ವಿಚಾರಣೆ ನಡೆಸುವ ಕುರಿತು.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂ: ಮಮಇ 37 ಎಸ್‌ಜೆಡಿ 98 ದಿನಾಂಕ: 27.6.2001.
2) ಶ್ರೀ ಮಹಮ್ಮದ್ ಸರ್ವರ್, ಇವರ ಪುನರ್ ಪರಿಶೀಲನಾ ಅರ್ಜಿ ದಿನಾಂಕ: 25.7.2001.
3) ಸರ್ಕಾರಿ ಆದೇಶ ಸಂ. ಮಮಇ/37/ಎಸ್‌ಜೆಡಿ/98 ದಿನಾಂಕ: 23.9.2002.
4) ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂ: 14156/02. ದಿನಾಂಕ: 1.4.2003.
5) ಸರ್ಕಾರಿ ಆದೇಶ ಸಂ: ಮಮಇ 97 ಎಸ್‌ಜೆಡಿ 2003 ದಿನಾಂಕ: 24.9.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ(1)ರ ದಿನಾಂಕ: 27.6.2001 ರ ಆದೇಶದಲ್ಲಿ ಶ್ರೀ ಮಹಮ್ಮದ್ ಸರ್ವರ್, ಇವರು 1994-95ನೇ ಸಾಲಿನಲ್ಲಿ ಬಾಲವಿಕಾಸ ಯೋಜನಾಧಿಕಾರಿಯಾಗಿ ಬಳ್ಳಾರಿ ಗ್ರಾಮಾಂತರ ಜಿಲ್ಲೆ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ 7 ಗುರುತರ ಆರೋಪಗಳ ಮೇಲೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ IIರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಿದ್ದು ಅವರ ವಿರುದ್ದದ 7 ಆರೋಪಗಳಲ್ಲಿ 5 ಆರೋಪಗಳು ಸಾಬೀತಾಗಿದ್ದರಿಂದ ಅವರು ಸರ್ಕಾರಕ್ಕೆ ರೂ.1,10,500-00 ಗಳ ನಷ್ಟ ಉಂಟು ಮಾಡಿದ್ದು ಅದನ್ನು ಬಡ್ಡಿ ಸಮೇತವಾಗಿ ವಸೂಲು ಮಾಡಲು ಆದೇಶಿಸಿ ಅವರನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) 1957 ರ ನಿಯಮ 8 (VII)ರಡಿಯಲ್ಲಿ ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ. (2) ದಿನಾಂಕ: 25.7.2001 ರಲ್ಲಿ ಶ್ರೀ ಮಹಮದ್ ಸರ್ವರ್ ರವರು ದಿನಾಂಕ: 27.6.2001ರ ಆದೇಶದ ಪುನರ್ ಪರಿಶೀಲನೆಗೆ ಅರ್ಜಿಯನ್ನು ಸಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ.ಸಂ. (3)ರ ದಿನಾಂಕ: 23.9.2002 ರ ಆದೇಶದಲ್ಲಿ ಶ್ರೀ ಮಹಮ್ಮದ್ ಸರ್ವರ್ ರವರು ಸರ್ಕಾರಕ್ಕೆ ಸಲ್ಲಿಸಿದ ಮನವಿಯನ್ನು ಪರಿಶೀಲಿಸಿ, ಆದೇಶ ಸಂ. ಮಮಇ/37/ಎಸ್‌ಜೆಡಿ 98 ದಿನಾಂಕ: 27.6.2001ರ ಸಲ್ಲಿಸಿದ ಪುನರ್ ಪರಿಶೀಲನಾ ಅರ್ಜಿಯನ್ನು ಸರ್ಕಾರವು ತಿರಸ್ಕರಿಸಿರುತ್ತದೆ.

ಶ್ರೀ ಮಹಮ್ಮದ್ ಸರ್ವರ್ ರವರು ಕರ್ನಾಟಕ ನ್ಯಾಯಮಂಡಲಿಯಲ್ಲಿ ಅರ್ಜಿಸಲ್ಲಿಸಿದ್ದು, ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಶ್ರೀ ಮಹಮ್ಮದ್ ಸರ್ವರ್ ರವರನ್ನು ಸೇವೆಯಿಂದ ತೆಗೆದುಹಾಕಿದ ಆದೇಶದ ವಿರುದ್ಧ ಅರ್ಜಿ ಸಲ್ಲಿಸಿರುವ ಅರ್ಜಿಯನ್ನು ಪ್ರಾಥಮಿಕ ವಿಚಾರಣೆಯಲ್ಲಿಯೇ ಪರಿಶೀಲಿಸಿ ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ದಿನಾಂಕ: 1.4.2003ರ ಆದೇಶದಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

In the circumstances it is clear that The Order Annexure-A5 bearing No. Ma. Ma. E 37 SJD 98. dated: 27.6.2001 and Annexure- A7 hearing No. Ma. Ma. E. 37 SJD 98 dated: 23.9.2002 both are vitiated on account of non-conformity with Rule 11 of the CCA Rules and deserves to be and are setaside It is ordered that having regard to the fact that nearly five years have elapsed Since the initiation of disciplinary proceedings and its fruitless conclusion, the matter is remitted to the Disciplinary; Authority to hold the enquiry afresh by recording the evidences of the witnesses cited in the charge sheet strictly in accordance with the Official Memorandum dated: 28.6.2001. The Applicant shall be entitled to all the consequential benefits on setting aside of orders Annexures-A5 and A7.

ಇಲಾಖಾ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರ ಅಡಿ ಹೊಸದಾಗಿ ಮಾಡಿ 9 ತಿಂಗಳೊಳಗಾಗಿ ಪೂರ್ಣಗೊಳಿಸುವಂತೆ ಆದೇಶಿಸಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (5) ದಿನಾಂಕ: 24.9.2003ರ ಆದೇಶದಲ್ಲಿ ಕರ್ನಾಟಕ ಆಡಳಿತ ಮಂಡಳಿ ಅರ್ಜಿ ಸಂಖ್ಯೆ: 14156/2002 ರಲ್ಲಿ ದಿನಾಂಕ: 1.4.2003 ರಂದು ನೀಡಿದ ತೀರ್ಪಿನಂತೆ ಶ್ರೀ ಮಹಮ್ಮದ್ ಸರ್ವರ್, ಹಿಂದಿನ ಬಾಲವಿಕಾಸ ಯೋಜನಾಧಿಕಾರಿ, ಬಳ್ಳಾರಿ ರವರನ್ನು ಸರ್ಕಾರಿ ಸೇವೆಗೆ ಹಿಂದಕ್ಕೆ ತೆಗೆದುಕೊಂಡು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲ್ಲೂಕಿನಲ್ಲಿ ಖಾಲಿ ಇರುವ ಬಾಲವಿಕಾಸ ಯೋಜನಾಧಿಕಾರಿ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿ ಎಲ್ಲಾ ಸೌಲಭ್ಯಗಳನ್ನು ನೀಡಲಾಗಿದೆ.

ಕರ್ನಾಟಕ ಆಡಳಿತ ನ್ಯಾಯಮಂಡಳಿಯ ತೀರ್ಮಾನದಂತೆ ಶ್ರೀ ಮಹಮ್ಮದ್ ಸರ್ವರ್, ಬಾಲವಿಕಾಸ ಯೋಜನಾಧಿಕಾರಿ, ಅಂಕೋಲಾ ತಾಲ್ಲೂಕು, ಉತ್ತರಕನ್ನಡ ಜಿಲ್ಲೆ ಇವರ ವಿರುದ್ಧ ಹೊಸದಾಗಿ ಇಲಾಖಾ ವಿಚಾರಣೆಯನ್ನು ನಡೆಸಲು ಕೆ.ಸಿ.ಎಸ್. (ಸಿ.ಸಿ.ಎ) 1957ರ ನಿಯಮಾವಳಿಗಳ ನಿಯಮ 11(2)ರ ಮೇರೆಗೆ ವಿಚಾರಣಾಧಿಕಾರಿಗಳನ್ನು ಮತ್ತು ಇದೇ ನಿಯಮಾವಳಿಗಳ ನಿಯಮ 11(5)ರನ್ವಯ ಮಂಡನಾಧಿಕಾರಿಯನ್ನು ನೇಮಕ ಮಾಡುವ ಕುರಿತು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 97 ಎಸ್‌ಜೆಡಿ 2003 ಬೆಂಗಳೂರು ದಿನಾಂಕ: 22ನೇ ಅಕ್ಟೋಬರ್ 2003**

ಶ್ರೀ ಮಹಮ್ಮದ್ ಸರ್ವರ್ ಬಾಲವಿಕಾಸ ಯೋಜನಾಧಿಕಾರಿ ಅಂಕೋಲಾ ತಾಲ್ಲೂಕ್ ಇವರ ವಿರುದ್ಧ ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂಖ್ಯೆ: 14156/2003 ದಿನಾಂಕ: 1.4.2003ರಲ್ಲಿ ನೀಡಿರುವ ತೀರ್ಪಿನ ಅನ್ವಯ ಇವರ ವಿರುದ್ಧ ಹೂಡಲಾಗಿರುವ ಆರೋಪಗಳ ಮೇಲೆ ಕರ್ನಾಟಕ ನಾಗರೀಕ ಸೇವಾ (ನಡತೆ, ವರ್ಗೀಕರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರಡಿಯಲ್ಲಿ ಹೊಸದಾಗಿ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಆದೇಶಿಸಿದೆ. ಇದಕ್ಕಾಗಿ ಶ್ರೀ ಟಿ. ಜೆ. ಮರಿಯಪ್ಪ ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾ ಅಧಿಕಾರಿಗಳನ್ನಾಗಿಯೂ ಮತ್ತು ಶ್ರೀಮತಿ ಎಸ್. ಟಿ. ಭಾನು, ಜಂಟಿ ನಿರ್ದೇಶಕರು,

(ಆಡಳಿತ) ಪ್ರಧಾನ ಕಛೇರಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು, ಇವರನ್ನು ಮಂಡನಾಧಿಕಾರಿಗಳನ್ನಾಗಿಯೂ ನೇಮಿಸಿ ಆದೇಶಿಸಲಾಗಿದೆ.

ವಿಚಾರಣಾಧಿಕಾರಿಗಳು ಈ ವಿಚಾರಣೆಯನ್ನು ಪ್ರಾರಂಭಿಸಿದ ಮೂರು ತಿಂಗಳೊಳಗಾಗಿ ಅಂತಿಮ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪ್ರ. ದ. ಸಿದ್ಧಾಂತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್. 1371

## ಕಂದಾಯ ಸಚಿವಾಲಯ

**ವಿಷಯ:** ಹಿರಿಯ ಉಪ ನೋಂದಣಾಧಿಕಾರಿಗಳ ಹುದ್ದೆ ಸ್ಥಳಾಂತರ ಕುರಿತು.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೇವನಹಳ್ಳಿ ಹಾಗೂ ನೆಲಮಂಗಲ ಉಪ ನೋಂದಣಾಧಿಕಾರಿಗಳ ಕಛೇರಿ ವ್ಯಾಪ್ತಿಯಲ್ಲಿ ಸ್ಥಿರ ಆಸ್ತಿಗಳ ವಹಿವಾಟು ಹೆಚ್ಚಾಗಿದ್ದು ಈ ಕಛೇರಿಗಳಲ್ಲಿ ನೋಂದಣಿ ಕಾರ್ಯಗಳು ಅಡೆತಡೆ ಉಂಟಾಗದೆ ಸರಳ ಹಾಗೂ ಸುಗಮವಾಗಿ ಮುಂದುವರೆಸುವ ಹಾಗೂ ಸರ್ಕಾರಕ್ಕೆ ರಾಜಸ್ವ ಹೆಚ್ಚಿಸುವ ಹಿನ್ನೆಲೆಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ಉಪ ನೋಂದಣಿ ಕಛೇರಿಗಳಿಗೆ ಹೆಚ್ಚುವರಿ ಉಪ ನೋಂದಣಾಧಿಕಾರಿಗಳ ಸೇವೆ ಅವಶ್ಯಕತೆ ಇರುವುದನ್ನು ಮನಗಂಡು ಉಪ ನೋಂದಣಿ ಕಛೇರಿ, ಜಮಖಂಡಿ ಹಾಗೂ ಗೋಕಾಕ್ ಉಪ ನೋಂದಣಿ ಕಛೇರಿಯಲ್ಲಿ ಹಾಲಿ ಖಾಲಿ ಇರುವ ಹಿರಿಯ ಉಪ ನೋಂದಣಾಧಿಕಾರಿ ಹುದ್ದೆಗಳನ್ನು ದೇವನಹಳ್ಳಿ ಹಾಗೂ ನೆಲಮಂಗಲ ಉಪ ನೋಂದಣಿ ಕಛೇರಿಗಳಿಗೆ ಮತ್ತು ಮೈಸೂರು ದಕ್ಷಿಣ ಉಪ ನೋಂದಣಿ ಕಛೇರಿಯಲ್ಲಿ ಹಾಲಿ ಖಾಲಿ ಇರುವ ಹಿರಿಯ ಉಪ ನೋಂದಣಾಧಿಕಾರಿ ಹುದ್ದೆಯನ್ನು ಮೈಸೂರು ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿಗೆ ಅಧೀಕ್ಷಕರ ಹುದ್ದೆಯನ್ನಾಗಿ ಸ್ಥಳಾಂತರಿಸಲು ಸರ್ಕಾರವು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 28 ಮುನೋಸೇ (3) 2003, ಬೆಂಗಳೂರು, ದಿನಾಂಕ: 25ನೇ ಅಕ್ಟೋಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಜಮಖಂಡಿ, ಗೋಕಾಕ್ ಮತ್ತು ಮೈಸೂರು ದಕ್ಷಿಣ ಉಪ ನೋಂದಣಿ ಕಛೇರಿಗಳಲ್ಲಿ ಹಾಲಿ ಖಾಲಿ ಇರುವ ಹಿರಿಯ ಉಪ ನೋಂದಣಾಧಿಕಾರಿಗಳ ಹುದ್ದೆಗಳನ್ನು ಕ್ರಮವಾಗಿ ಉಪ ನೋಂದಣಾಧಿಕಾರಿಗಳ ಕಛೇರಿ ದೇವನಹಳ್ಳಿ ಮತ್ತು ನೆಲಮಂಗಲ ಉಪ ನೋಂದಣಿ ಕಛೇರಿಗಳಿಗೆ ಹೆಚ್ಚುವರಿ ಹಿರಿಯ ಉಪ ನೋಂದಣಾಧಿಕಾರಿಗಳ ಹುದ್ದೆಗಳನ್ನಾಗಿ ಮತ್ತು ಮೈಸೂರು ದಕ್ಷಿಣ ಉಪ ನೋಂದಣಾಧಿಕಾರಿಗಳ ಕಛೇರಿ ಹಿರಿಯ ಉಪ ನೋಂದಣಾಧಿಕಾರಿ ಹುದ್ದೆಯನ್ನು ಮೈಸೂರು ಜಿಲ್ಲೆ ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿ ಅಧೀಕ್ಷಕರ ಹುದ್ದೆಯನ್ನಾಗಿ ಸ್ಥಳಾಂತರಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಜಿ. ನಾರಾಯಣ**
ಸರ್ಕಾರದ ಅಧೀನ ಕಾರ್ಯದರ್ಶಿ,(ಪ್ರಭಾರ)
ಕಂದಾಯ ಇಲಾಖೆ,
(ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 1373

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ದಿನಾಂಕ: 17.11.2003 ರಿಂದ 21.11.2003 ರವರೆಗೆ ನವದೆಹಲಿಯಲ್ಲಿ ನಡೆಯಲಿರುವ ಲಾಸ್ ಇನ್ ಮುನಿಸಿಪಲ್ ಗವರನೆನ್ಸ್‌ನ ಪ್ರಥಮ ತರಬೇತಿ ಕಾರ್ಯಕ್ರಮಕ್ಕೆ ಅಧಿಕಾರಿಗಳನ್ನು ನಿಯೋಜಿಸುವ ಬಗ್ಗೆ.

**ಓದಲಾಗಿದೆ:**
1) ಏಕ ಕಡತ ಸಂಖ್ಯೆ: ನಯೋ.ಸಿ(2):316. ತ.ಕಾ.2003 ದಿನಾಂಕ: 30.9.2003 ನಿರ್ದೇಶಕರು, ನಗರ ಯೋಜನಾ ಇಲಾಖೆ, ಬೆಂಗಳೂರು.
2) ದಿನಾಂಕ: 10.9.2003ರ ಪತ್ರಸಂಖ್ಯೆ: 13-323:2003-ಟಿ ಕಾರ್ಯಕ್ರಮ ನಿರ್ದೇಶಕರು ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಪಬ್ಲಿಕ್ ಅಡ್ಮಿನಿಸ್ಟ್ರೇಷನ್ ನವದೆಹಲಿ ಇವರಿಂದ.

**ಪ್ರಸ್ತಾವನೆ:**

ಮೇಲೆ ಓದಲಾದ ಏಕ ಕಡತ (1)ರಲ್ಲಿ ನಗರ ಯೋಜನಾ ನಿರ್ದೇಶಕರು, ಲಾಸ್‌ಇನ್ ಮುನಿಸಿಪಲ್ ಗವರನೆನ್ಸ್ ಪ್ರಥಮ ತರಬೇತಿ ಕಾರ್ಯಕ್ರಮವು ದಿನಾಂಕ: 17.11.2003 ರಿಂದ 21.11.2003 ರವರೆಗೆ ನವದೆಹಲಿಯಲ್ಲಿ ನಡೆಯಲಿದ್ದು, ಈ ತರಬೇತಿಗೆ ಶ್ರೀ ಎಲ್. ಲಿಂಗಯ್ಯ, ಸಹಾಯಕ ನಿರ್ದೇಶಕರು, ನಗರ ಯೋಜನಾ ಇಲಾಖೆ, ತುಮಕೂರು, ಇವರನ್ನು ನಿಯೋಜಿಸಲು ಪ್ರಸ್ತಾಪಿಸುತ್ತಾ, ಈ ಬಗ್ಗೆ ತಗಲುವ ವೆಚ್ಚವನ್ನು ಇಲಾಖೆಗೆ 2003-04ನೇ ಸಾಲಿಗೆ ಮಂಜೂರಾಗಿರುವ 2217-ನಗರಾಭಿವೃದ್ಧಿ ಲೆಕ್ಕ ಶೀರ್ಷಿಕೆಯ ಅನುದಾನದಲ್ಲಿ ಭರಿಸಲು ಅನುಮತಿ ಕೋರಿದ್ದಾರೆ.

ಈ ವಿಷಯವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 148 ನಯೋಸೇ 2003 ಬೆಂಗಳೂರು ದಿನಾಂಕ: 27ನೇ ಅಕ್ಟೋಬರ್ 2003**

ಶ್ರೀ ಎಲ್. ಲಿಂಗಯ್ಯ, ಸಹಾಯಕ ನಿರ್ದೇಶಕರು, ನಗರ ಯೋಜನಾ ಇಲಾಖೆ, ತುಮಕೂರು ಇವರನ್ನು ದಿನಾಂಕ: 17.11.2003 ರಿಂದ 21.11.2003ರವರೆಗೆ ನವದೆಹಲಿಯಲ್ಲಿ ನಡೆಯಲಿರುವ ಲಾಸ್ ಇನ್ ಮುನಿಸಿಪಲ್ ಗವರನೆನ್ಸ್ ಪ್ರಥಮ ತರಬೇತಿ ಕಾರ್ಯಕ್ರಮಕ್ಕೆ ನಿಯೋಜಿಸಲು ಸರ್ಕಾರವು ಅನುಮತಿ ನೀಡಿದೆ.

ಅಧಿಕಾರಿಗಳು ಪ್ರಯಾಣಭತ್ಯೆ ಮತ್ತು ದಿನಭತ್ಯೆ ಪಡೆಯಲು ನಿಯಮಾನುಸಾರ ಅರ್ಹರಾಗಿದ್ದು ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2217-ನಗರಾಭಿವೃದ್ಧಿ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಸಂಖ್ಯೆ:ಎಫ್‌ಡಿ1:ಟಿಎಸ್‌ಪಿ:96 ದಿನಾಂಕ:10.7.96 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ರಂಗನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1374 ನಗರಾಭಿವೃದ್ಧಿ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ:** ಬೆಂಗಳೂರು ನಗರ ಜಿಲ್ಲೆಯಲ್ಲಿ ಹೊಸದಾಗಿ ಸೃಜಿಸಿರುವ ಬೆಂಗಳೂರು ಪೂರ್ವ ತಾಲ್ಲೂಕಿನ ಕೃಷ್ಣರಾಜಪುರದಲ್ಲಿ ಉಪಖಜಾನೆಗೆ ಸಿಬ್ಬಂದಿ ಮಂಜೂರಾತಿಯ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 58 ಭೂದಾಪು 1998. ದಿನಾಂಕ: 15.11.2001

2) ಖಜಾನೆ ನಿರ್ದೇಶಕರ ಪತ್ರ ಸಂಖ್ಯೆ: ಸಿಬ್ಬಂದಿ (1) ಸಿಆರ್ 104: 2001-02 ದಿನಾಂಕ: 5.12.2001 ಮತ್ತು 11.7.2003.

3) ಮಾನ್ಯ ಸಮಾಜ ಕಲ್ಯಾಣ ಸಚಿವರ ಪತ್ರ ಸಂಖ್ಯೆ: ಎಂಎಸ್‌ಡಬ್ಲು:ಟಿ:1210/2003 ದಿನಾಂಕ: 14.8.2003.

**ಪ್ರಸ್ತಾವನೆ:**

ಮೇಲೆ (1) ರಲ್ಲಿನ ಅಧಿಸೂಚನೆಯಲ್ಲಿ ಬೆಂಗಳೂರು ಜಿಲ್ಲೆಯಲ್ಲಿ ಹೊಸದಾಗಿ ಬೆಂಗಳೂರು ಪೂರ್ವ ತಾಲ್ಲೂಕನ್ನು ಸೃಜಿಸಲಾಗಿದ್ದು, ಇದರ ಕೇಂದ್ರ ಸ್ಥಾನವನ್ನಾಗಿ ಕೃಷ್ಣರಾಜಪುರದಲ್ಲಿರುವಂತೆ ಪರಿಗಣಿಸಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 5.12.2001ರ ಪತ್ರದಲ್ಲಿ ಖಜಾನೆ ಇಲಾಖೆಗೆ ಸಂಬಂಧಿಸಿದಂತೆ ಕೃಷ್ಣರಾಜಪುರದಲ್ಲಿ ಉಪಖಜಾನೆಯನ್ನು ಪ್ರಾರಂಭಿಸಲು ಉಪನಿರ್ದೇಶಕರು, ನಗರ ಜಿಲ್ಲಾ ಖಜಾನೆ ಬೆಂಗಳೂರು ರವರು ಕೃಷ್ಣರಾಜಪುರದಲ್ಲಿನ ನಗರ ಸಭೆಯವರು ನಿರ್ಮಿಸಿರುವ ಮಾರಾಟ ಮಳಿಗೆಗಳಲ್ಲಿ ಮುಂದೆ ಉತ್ತಮ ಕಟ್ಟಡವು ಭದ್ರಕೋಣೆ ಒಳಗೊಂಡಂತೆ ಲಭ್ಯವಾಗುವವರೆಗೆ ಖಜಾನೆಯ ಕಛೇರಿ ವ್ಯವಹಾರವನ್ನು ಪ್ರಾರಂಭಿಸಬಹುದಾಗಿರುತ್ತದೆ ಎಂದು ವರದಿಸಿರುತ್ತಾರೆ. ಉಪಖಜಾನೆ ವಹಿವಾಟು ಪ್ರಾರಂಭಿಸಲು ಈ ಕೆಳಕಂಡ ಅಧಿಕಾರಿ/ಸಿಬ್ಬಂದಿಯ ಅವಶ್ಯಕತೆ ಇರುವುದಾಗಿ ಖಜಾನೆ ನಿರ್ದೇಶಕರು ತಿಳಿಸಿರುತ್ತಾರೆ.

| | | |
|---|---|---|
| 1. | ಪತ್ರಾಂಕಿತ ಉಪ ಖಜಾನಾಧಿಕಾರಿ | - 1 |
| 2. | ಮುಖ್ಯಲೆಕ್ಕಿಗರು | - 1 |
| 3. | ಪ್ರಥಮ ದರ್ಜೆ ಸಹಾಯಕ | - 1 |
| 4. | ದ್ವಿತೀಯ ದರ್ಜೆ ಸಹಾಯಕ | - 3 |
| 5. | ನಗದು ಗುಮಾಸ್ತ | - 1 |
| 6. | ಡಿ ಶ್ರೇಣಿ | - 1 |
| | **ಒಟ್ಟು ಹುದ್ದೆ** | **- 8** |

ಮೇಲೆ (2) ರಲ್ಲಿ ಓದಲಾದ ದಿನಾಂಕ: 11.07.2003ರ ಪತ್ರದಲ್ಲಿ ಬೆಂಗಳೂರು ಪೂರ್ವ ತಾಲ್ಲೂಕಿನ ಕೃಷ್ಣರಾಜಪುರದಲ್ಲಿ ಸ್ಥಾಪಿಸಲು ಉದ್ದೇಶಿಸಿರುವ ನೂತನ ಉಪಖಜಾನೆಯ ನಗದು ವಹಿವಾಟನ್ನು ವಹಿಸಿಕೊಳ್ಳಲು ಎಸ್.ಬಿ.ಎಂ. ರಾಮಮೂರ್ತಿ ನಗರದ ಶಾಖೆಯವರು ಈಗಾಗಲೇ ಅಭಿಮತ ನೀಡಿರುವುದಾಗಿ ಈ ಪ್ರಕ್ರಿಯೆಗೆ ತಮ್ಮ ಅಭ್ಯಂತರವಿಲ್ಲವೆಂದು ರಿಜರ್ವ ಬ್ಯಾಂಕ್ ನವರು ತಿಳಿಸಿರುವ ಹಿನ್ನೆಲೆಯಲ್ಲಿ ಸದರಿ ಉಪ ಖಜಾನೆಯನ್ನು ಪ್ರಾರಂಭಿಸಲು, ಸಿಬ್ಬಂದಿ ಮಂಜೂರಾತಿಗಾಗಿ ಹಾಗೂ ಪೀಠೋಪಕರಣಗಳ ಮಂಜೂರಾತಿಗಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಉದ್ದೇಶಿತ ಉಪ ಖಜಾನೆಯನ್ನು ಸಮಗ್ರ ಖಜಾನೆ ಗಣಕ ಯೋಜನೆಯಡಿ ತರಬೇಕಾಗಿರುವುದರಿಂದ ಗಣಕೀಕರಣಕ್ಕೆ ಸಂಬಂಧಪಟ್ಟಂತೆ ಬೇಕಾಗಿರುವ ಯಂತ್ರಾಂಶಗಳಾದ

1. ಕೃಷ್ಣರಾಜಪುರಂ ಕೇಂದ್ರದಲ್ಲಿ ಬೆಂಗಳೂರು ಪೂರ್ವ ತಾಲ್ಲೂಕು ಉಪ ಖಜಾನೆಯನ್ನು ಪ್ರಾರಂಭಿಸಿ ರಾಮಮೂರ್ತಿ ನಗರದಲ್ಲಿನ ಎಸ್.ಬಿ.ಎಂ. ಶಾಖೆಯು ಏಜೆನ್ಸಿ ಬ್ಯಾಂಕ್ ಆಗಿ ಕಾರ್ಯನಿರ್ವಹಿಸುವುದು.
2. ಉಪ ಖಜಾನೆಯು ಸದ್ಯದಲ್ಲಿ ಭದ್ರತಾ ಕೊಠಡಿ, ರಹಿತವಾಗಿ, ಯಾವುದೇ ಸೂಕ್ತ ಸರ್ಕಾರಿ ಕಟ್ಟಡ ಅಥವಾ ಲಭ್ಯವಿಲ್ಲದಿದ್ದಲ್ಲಿ ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸುವುದು.
3. ಉಪ ಖಜಾನೆಯು ಚಿಕ್ಕು ಪದ್ಧತಿಯಲ್ಲಿ ಪಾವತಿಯನ್ನು ನಿರ್ವಹಿಸುವುದು.

4. ಸದರಿ ಉಪ ಖಜಾನೆಗೆ ಪೂರ್ಣ ಪ್ರಮಾಣದ ಸಿಬ್ಬಂದಿಯನ್ನು ಹೊಸದಾಗಿ ಸೃಜಿಸಿ ಆದೇಶಿಸುವುದು. (ವಾರ್ಷಿಕ ಸರಾಸರಿ ವೆಚ್ಚ ರೂ.4,78,018/-ಗಳನ್ನು ಲೆಕ್ಕಶೀರ್ಷಿಕೆ 2054-00-097-0-01 ರಡಿ ಭರಿಸುವುದು).
5. ನೂತನ ಉಪ ಖಜಾನೆಗೆ ಪೀಠೋಪಕರಣಗಳಿಗಾಗಿ ರೂ.68,310/-ನ್ನು ಏಕಕಾಲಿಕ ವೆಚ್ಚವಾಗಿ ಮಂಜೂರು ಮಾಡುವುದು. (ಲೆಕ್ಕ ಶೀರ್ಷಿಕೆ 2054-00-095-0-02 ಖಜಾನೆ ಬಲಪಡಿಸುವುದು 125 ಆಧುನೀಕರಣ)
6. ಕಛೇರಿ ಸಾದಿಲ್ವಾರು ವೆಚ್ಚ ಅಂದಾಜು ವಾರ್ಷಿಕ ರೂ. 23,400/- ಆಗಿದ್ದು, ರೂ. 200/-ನ್ನು ಖಾಯಂ ಮುಂಗಡವನ್ನಾಗಿ ಮಂಜೂರು ಮಾಡುವುದು.
7. ಗಣಕ ಕೊಠಡಿ (ವಿದ್ಯುತ್ ಹಾಗೂ ಸಿವಿಲ್ ಕಾಮಗಾರಿ) ಗಣಕ ಪೀಠೋಪಕರಣಗಳು ಹಾಗೂ ಯಂತ್ರಾಂಶಗಳಿಗಾಗಿ ಅಂದಾಜು ರೂ. 12 ಲಕ್ಷ ಮಂಜೂರಾತಿ (ಲೆಕ್ಕ ಶೀರ್ಷಿಕೆ 2054-00-095-0-03 ಖಜಾನೆ ಲೆಕ್ಕಪದ್ಧತಿ ಆಧುನೀಕರಿಸುವುದು 125 ಆಧುನೀಕರಣ).

ಇವುಗಳನ್ನೊಳಗೊಂಡಂತೆ ಸೂಕ್ತ ಆದೇಶವನ್ನು ಹೊರಡಿಸುವಂತೆ ಖಜಾನೆ ನಿರ್ದೇಶಕರು ಕೋರಿರುತ್ತಾರೆ. ಸದರಿ ಉಪ ಖಜಾನೆ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಸಚಿವರು ಮೇಲೆ (3) ರಲ್ಲಿನ ಪತ್ರದಲ್ಲಿ ಕೋರಿರುತ್ತಾರೆ, ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 261 ಆಖಇ 2001, ಬೆಂಗಳೂರು ದಿನಾಂಕ: 20ನೇ ಸೆಪ್ಟೆಂಬರ್ 2003**

ಮೇಲೆ ಪ್ರಸ್ತಾವನೆಯಲ್ಲಿ ತಿಳಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಬೆಂಗಳೂರು ಪೂರ್ವ ತಾಲ್ಲೂಕಿನ ಕೃಷ್ಣರಾಜಪುರದಲ್ಲಿ ಉಪ ಖಜಾನೆಯನ್ನು ಸ್ಥಾಪಿಸಲು ಈ ಕೆಳಕಂಡ ಅಂಶಗಳನ್ನೊಳಗೊಂಡಂತೆ ಸರ್ಕಾರವು ಮಂಜೂರಾತಿ ನೀಡಿದೆ.

1. ಕೃಷ್ಣರಾಜಪುರಂ ಕೇಂದ್ರದಲ್ಲಿ ಬೆಂಗಳೂರು ಪೂರ್ವ ತಾಲ್ಲೂಕು ಉಪ ಖಜಾನೆಯನ್ನು ಪ್ರಾರಂಭಿಸಿ ರಾಮಮೂರ್ತಿ ನಗರದಲ್ಲಿನ ಎಸ್.ಬಿ.ಎಂ. ಶಾಖೆಯು ಏಜೆನ್ಸಿ ಬ್ಯಾಂಕ್ ಆಗಿ ಕಾರ್ಯನಿರ್ವಹಿಸುವುದು.
2. ಉಪ ಖಜಾನೆಯು ಸದ್ಯದಲ್ಲಿ ಭದ್ರತಾ ಕೊಠಡಿ ರಹಿತವಾಗಿ, ಯಾವುದೇ ಸೂಕ್ತ ಸರ್ಕಾರಿ ಕಟ್ಟಡ ಅಥವಾ ಲಭ್ಯವಿಲ್ಲದಿದ್ದಲ್ಲಿ ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸುವುದು.
3. ಉಪ ಖಜಾನೆಯು ಚಿಕ್ಕು ಪದ್ಧತಿಯಲ್ಲಿ ಪಾವತಿಯನ್ನು ನಿರ್ವಹಿಸುವುದು.
4. ನೂತನ ಉಪ ಖಜಾನೆಗೆ ಪೀಠೋಪಕರಣಗಳಿಗಾಗಿ ರೂ. 68,310/-ನ್ನು ಏಕಕಾಲಿಕ ವೆಚ್ಚವಾಗಿ ಮಂಜೂರು ಮಾಡುವುದು. (ಲೆಕ್ಕ ಶೀರ್ಷಿಕೆ 2054-00-095-0-02 ಖಜಾನೆ ಬಲಪಡಿಸುವುದು 125 ಆಧುನೀಕರಣ)
5. ಕಛೇರಿ ಸಾದಿಲ್ವಾರು ವೆಚ್ಚ ಅಂದಾಜು ವಾರ್ಷಿಕ ರೂ. 23,400/- ಆಗಿದ್ದು, ರೂ. 200/-ನ್ನು ಖಾಯಂ ಮುಂಗಡವನ್ನಾಗಿ ಮಂಜೂರು ಮಾಡುವುದು.
6. ಗಣಕ ಕೊಠಡಿ (ವಿದ್ಯುತ್ ಹಾಗೂ ಸಿವಿಲ್ ಕಾಮಗಾರಿ) ಗಣಕ ಪೀಠೋಪಕರಣಗಳು ಹಾಗೂ ಯಂತ್ರಾಂಶಗಳಿಗಾಗಿ ಅಂದಾಜು ರೂ.12ಲಕ್ಷ ಮಂಜೂರಾತಿ (ಲೆಕ್ಕ ಶೀರ್ಷಿಕೆ 2054-00-095-0-03 ಖಜಾನೆ ಲೆಕ್ಕಪದ್ಧತಿ ಆಧುನೀಕರಿಸುವುದು 125 ಆಧುನೀಕರಣ).

ಹಾಗೂ ಉಪ ಖಜಾನೆಯನ್ನು ಪ್ರಾರಂಭಿಸಲು ಅವಶ್ಯವಿರುವ ಹಾಗೂ ಪ್ರಸ್ತಾವನೆಯಲ್ಲಿ ನಮೂದಿಸಿರುವ 8 ಜನ ಅಧಿಕಾರಿ/ ಸಿಬ್ಬಂದಿಗಳನ್ನು ಸೃಜಿಸಲೂ ಸಹ ಸರ್ಕಾರವು ಮಂಜೂರಾತಿ ನೀಡಿದೆ. ಈ ಅಧಿಕಾರಿ/ ಸಿಬ್ಬಂದಿಯನ್ನು ಇಲಾಖೆಯ ಸಿಬ್ಬಂದಿಯಿಂದಲೇ ಪುನರ್ ನಿಯೋಜನೆ ಮೂಲಕ ತುಂಬಬೇಕೆಂಬ ಷರತ್ತನ್ನು ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಪ್ರಭಾಕರ್**

ಪಿ.ಆರ್. 1375 ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆಡಳಿತ).

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಹಳದಿ ಪಡಿತರ ಚೀಟಿ ಯೋಜನೆ ಜಾರಿಗೊಳಿಸುವುದು- ಪಡಿತರ ಚೀಟಿದಾರರಿಗೆ ವಿತರಿಸುವ ಆಹಾರಧಾನ್ಯಗಳ ಪ್ರಮಾಣ ಮತ್ತು ವಿತರಣಾ ದರಗಳನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:**
1) ದಿನಾಂಕ: 8.8.2000ರ ಸರ್ಕಾರಿ ಆದೇಶ ಸಂಖ್ಯೆ: ಆನಾಸ 192 ಡಿಆರ್ಎ 2000
2) ದಿನಾಂಕ: 3.11.2000ದ ಸರ್ಕಾರಿ ಆದೇಶ ಸಂಖ್ಯೆ: ಆನಾಸ 192 ಡಿಆರ್ಎ 2000
3) ದಿನಾಂಕ: 22.12.2001ರ ಸರ್ಕಾರದ ಆದೇಶ ಸಂಖ್ಯೆ: ಆನಾಸ 192 ಡಿಆರ್ಎ 2000 (ಭಾ-6)
4) ದಿನಾಂಕ: 4.2.2003ರ ಸರ್ಕಾರದ ಆದೇಶ ಸಂಖ್ಯೆ: ಆನಾಸ 192 ಡಿಆರ್ಎ 2000 (ಭಾ-6).
5) ದಿನಾಂಕ: 10.10.2002ರ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಸಿಎಸ್ 73 ಎಫ್‌ಸಿಎಸ್ 02,
6) ದಿನಾಂಕ: 16.7.2003ರ ಸರ್ಕಾರಿ ಆದೇಶ ಸಂಖ್ಯೆ: ಆನಾಸ 129 ಎಫ್‌ಸಿಎಸ್ 02.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 8.8.2000ದ ಸರ್ಕಾರಿ ಆದೇಶದಲ್ಲಿ ನೈಜ ಬಡತನ ರೇಖೆ ಕೆಳಗಿನ ಕುಟುಂಬಗಳಿಗೆ ಪ್ರತಿ ತಿಂಗಳಿಗೆ 8 ಕೆ.ಜಿ. ಅಕ್ಕಿಯನ್ನು ಕೆ.ಜಿ.ಗೆ ರೂ.3.50ರ ದರದಲ್ಲಿ ಮತ್ತು, 2 ಕೆ.ಜಿ. ಗೋಧಿಯನ್ನು ಕೆ.ಜಿ.ಗೆ ರೂ. 2.75ರ ದರದಲ್ಲಿ, ರಾಜ್ಯ ಸರ್ಕಾರದ ಸಹಾಯಧನದೊಂದಿಗೆ ವಿತರಿಸಲು ಆದೇಶಿಸಿದೆ. ಈ ಯೋಜನೆಯಡಿ ನೈಜ ಬಡತನ ರೇಖೆ ಕೆಳಗಿನ ಕುಟುಂಬಗಳಿಗೆ ಹಳದಿ ಬಣ್ಣದ ಪಡಿತರ ಚೀಟಿಗಳನ್ನು ವಿತರಿಸಲೂ ಸಹ ಆದೇಶಿಸಿದೆ. ಬಡತನ ರೇಖೆ ಕೆಳಗಿನ ಕುಟುಂಬಗಳನ್ನು 1997-98ರ ಸಾಲಿನಲ್ಲಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ನಡೆಸಿದ ಸಮೀಕ್ಷೆಯ ಆಧಾರದ ಮೇಲೆ ಗುರುತಿಸಲು ಮತ್ತು ಯೋಜನೆಯನ್ನು ದಿನಾಂಕ: 1.11.2000 ರಿಂದ ಜಾರಿಗೊಳಿಸಲು ಆದೇಶಿಸಲಾಯಿತು. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಸಿದ್ಧಪಡಿಸಿದ ಬಡತನ ರೇಖೆ ಕೆಳಗಿನ ಕುಟುಂಬಗಳ ಅಡಿಯಲ್ಲಿ ಅನರ್ಹ ಕುಟುಂಬಗಳು ಸೇರ್ಪಡೆಯಾಗಿವೆ ಎಂಬ ಮತ್ತು ಇತರ ದೂರುಗಳು ಬಂದಿದ್ದರಿಂದ ದಿನಾಂಕ: 1.11.2000 ದಿಂದ ಜಾರಿಗೆ ಬರಬೇಕಾಗಿದ್ದ ಹಳದಿ ಪಡಿತರ ಚೀಟಿ ಯೋಜನೆಯನ್ನು ದಿನಾಂಕ: 3.11.2000ದ ಸರ್ಕಾರದ ಆದೇಶ ಸಂಖ್ಯೆ: ಆನಾಸ 192 ಡಿಆರ್ಎ 2000ದ ಪ್ರಕಾರ ಸರ್ಕಾರದ ಮುಂದಿನ ಆದೇಶದವರೆಗೆ ಮುಂದೂಡಲಾಯಿತು.

ಹಳದಿ ಪಡಿತರ ಚೀಟಿ ಯೋಜನೆಯು ಬಳ್ಳಾರಿ, ಕೊಡಗು, ಬಾಗಲಕೋಟೆ, ದಕ್ಷಿಣ ಕನ್ನಡ, ಮೈಸೂರು ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಮತ್ತು ಬೆಳಗಾಂ ಜಿಲ್ಲೆಯ ಬೈಲಹೊಂಗಲ ತಾಲ್ಲೂಕಿನಲ್ಲಿ ಪ್ರಥಮ ಹಂತದಲ್ಲಿ ಜಾರಿಗೊಳಿಸಲಾಯಿತು. ಈ ಜಿಲ್ಲೆಗಳಲ್ಲಿ ಬಿ.ಪಿ.ಎಲ್. ಕುಟುಂಬಗಳು 8 ಕೆ. ಜಿ. ಅಕ್ಕಿ ಕೆ.ಜಿ.ಗೆ ರೂ. 3.50ರ ದರದಲ್ಲಿ ಮತ್ತು 2 ಕೆ. ಜಿ. ಗೋಧಿಯನ್ನು ಕೆ.ಜಿ.ಗೆ ರೂ.2.75ರ ದರದಲ್ಲಿಯೂ, ಉಳಿದ ಪ್ರಮಾಣದ ಅಕ್ಕಿ/ಗೋಧಿಯನ್ನು ಜಾರಿಯಲ್ಲಿರುವ ಬಿ.ಪಿ.ಎಲ್ ದರದಲ್ಲಿಯೂ ಪಡೆಯುತ್ತಿದ್ದಾರೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರವು ನೈಜ ಬಡತನ ರೇಖೆ ಕೆಳಗಿನ ಕುಟುಂಬಗಳನ್ನು (ಬಿ.ಪಿ.ಎಲ್) ಗುರುತಿಸಲು ಹೊಸದಾಗಿ ಮನೆ-ಮನೆ ಸಮೀಕ್ಷೆಯನ್ನು ನಡೆಸಲು ಆದೇಶಿಸಿತು. ಈ ಆದೇಶದಂತೆ ಗ್ರಾಮಾಂತರ ಪ್ರದೇಶಗಳಲ್ಲಿ ಹಾಗೂ ಪಟ್ಟಣ/ನಗರ ಪ್ರದೇಶಗಳ, ಅನೌಪಚಾರಿಕ ಪಡಿತರ ಪ್ರದೇಶಗಳ ಘೋಷಿತ/ಅಘೋಷಿತ ಕೊಳಚೆ ಪ್ರದೇಶಗಳಲ್ಲಿ ವಾಸಿಸುವ ಕುಟುಂಬಗಳ ಪೈಕಿ, ಬಿ.ಪಿ.ಎಲ್. ಕುಟುಂಬಗಳನ್ನು ಗುರುತಿಸಬೇಕಾಗಿದ್ದಿತು.

ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬಿ.ಪಿ.ಎಲ್ ಕುಟುಂಬಗಳ ಸಮೀಕ್ಷೆ ನಡೆಸಿದ, ಪರಿಣಾಮವಾಗಿ ಹೊಸದಾಗಿ ಗುರುತಿಸಲ್ಪಟ್ಟ ಎಲ್ಲಾ ನೈಜ ಬಿ.ಪಿ.ಎಲ್. ಕುಟುಂಬಗಳು ಒಳಗೊಂಡಂತೆ ಎಲ್ಲಾ ಜಿಲ್ಲೆಗಳಲ್ಲಿ ಹಳದಿ ಪಡಿತರ ಚೀಟಿ ಯೋಜನೆ ಸೌಲಭ್ಯವು ದಿನಾಂಕ: 1.5.2003 ರಿಂದ ಜಾರಿಗೆ ಬರತಕ್ಕದ್ದು ಎಂದು ಆದೇಶಿಸಲಾಗಿತ್ತು.

ಸಮೀಕ್ಷೆಯ ಆಧಾರದ ಮೇಲೆ ಗುರುತಿಸಲ್ಪಟ್ಟ ಕುಟುಂಬಗಳ ಪಟ್ಟಿಯನ್ನು ಸಾರ್ವಜನಿಕರ ಮಾಹಿತಿಗಾಗಿ ಸರ್ಕಾರಿ ಶಾಲೆಗಳು/ನ್ಯಾಯಬೆಲೆ ಅಂಗಡಿಗಳು/ಗ್ರಾಮ ಪಂಚಾಯಿತಿಗಳ ಕಛೇರಿಯ ಮುಂದೆ ಸಾರ್ವಜನಿಕ ಸ್ಥಳಗಳಲ್ಲಿ ಪ್ರದರ್ಶಿಸಿ, ಬಿ.ಪಿ.ಎಲ್. ಪಟ್ಟಿಯಲ್ಲಿ ಅನರ್ಹ ಕುಟುಂಬಗಳು ಸೇರ್ಪಡೆ ಆಗಿದ್ದಲ್ಲಿ ಅಂತಹ ಕುಟುಂಬಗಳ ಬಗ್ಗೆ ಮಾಹಿತಿಯನ್ನು ನೀಡಲು ಹಾಗೂ ಒಂದು ವೇಳೆ ಅರ್ಹ ಕುಟುಂಬಗಳು ಕೈಬಿಟ್ಟು ಹೋಗಿದ್ದಲ್ಲಿ ಅಂತಹ ಕುಟುಂಬಗಳು ಅರ್ಜಿ ಸಲ್ಲಿಸುವಂತೆಯೂ, ಪ್ರಚುರ ಪಡಿಸಲಾಯಿತು. ಹಾಗೂ ನಗರ ಪ್ರದೇಶಗಳಲ್ಲಿ ಕೊಳಚೆ ಪ್ರದೇಶಗಳ ಹೊರಗೆ ಬಿ.ಪಿ.ಎಲ್ ಕುಟುಂಬಗಳು ಇರಬಹುದಾದ ವಿಷಯವನ್ನು ಪರಿಗಣಿಸಿ, ಅಂತಹ ಕುಟುಂಬಗಳು ಅರ್ಜಿಗಳನ್ನು ಸಲ್ಲಿಸಲು ಅವಕಾಶವನ್ನು ನೀಡಲಾಯಿತು. ಹೀಗೆ ಸ್ವೀಕೃತವಾದ ಅರ್ಜಿಗಳನ್ನು ಪರಿಶೀಲಿಸಿ, ರಾಜ್ಯಾದ್ಯಂತ ಒಟ್ಟು 63 ಲಕ್ಷ ಸಂಖ್ಯೆಯ ಕುಟುಂಬಗಳಿಗೆ ಮಿತಿಗೊಳಿಸಿ ಎಲ್ಲಾ ಅರ್ಹ ಕುಟುಂಬಗಳನ್ನು ಬಿ.ಪಿ.ಎಲ್ ಕುಟುಂಬಗಳೆಂದು ಪರಿಗಣಿಸಲು ಸರ್ಕಾರವು ತೀರ್ಮಾನ ಕೈಗೊಂಡಿತು. ಬಿ.ಪಿ.ಎಲ್. ಪಟ್ಟಿಗಳ ಗಣಕೀಕರಣ ಮತ್ತು ಹೊಸದಾಗಿ ಹಳದಿ ಪಡಿತರ ಚೀಟಿ ಕೋರಿ ಸ್ವೀಕರಿಸಲಾದ ಅರ್ಜಿಗಳ ಪರಿಶೀಲನೆ ಇತ್ಯಾದಿ ಕಾರಣಗಳಿಗಾಗಿ ಹಳದಿ ಪಡಿತರ ಚೀಟಿ ಯೋಜನೆಯನ್ನು ಜಾರಿಗೊಳಿಸುವ ದಿನಾಂಕವು ಮುಂದೂಡಲ್ಪಟ್ಟಿತ್ತು. ಈ ಯೋಜನೆಯಲ್ಲಿ ಸಿದ್ಧಪಡಿಸಲಾಗುವ ಬಿ.ಪಿ.ಎಲ್, ಪಟ್ಟಿ ಮತ್ತು ಕಾರ್ಡುಗಳನ್ನು ಗಣಕೀಕರಣಗೊಳಿಸುವ ತೀರ್ಮಾನವನ್ನು ತೆಗೆದುಕೊಳ್ಳಲಾಯಿತು.

ಮೊದಲ ಹಂತದಲ್ಲಿ ಸಮೀಕ್ಷೆ ಮೂಲಕ ಗುರುತಿಸಲಾದ ಎಲ್ಲಾ ಕುಟುಂಬಗಳಿಗೆ ಹಳದಿ ಪಡಿತರ ಚೀಟಿಗಳನ್ನು ವಿತರಿಸಲಾಯಿತು. ಸಲ್ಲಿಸಿದ ಅರ್ಜಿಗಳನ್ನು ಪರಿಶೀಲಿಸಿದ ನಂತರ ಗುರುತಿಸಲ್ಪಟ್ಟ ಅರ್ಹ ಕುಟುಂಬಗಳಿಗೆ ತಾತ್ಕಾಲಿಕ ಹಳದಿ ಪಡಿತರ ಚೀಟಿಯನ್ನು ಹಂಚಲು ವ್ಯವಸ್ಥೆ ಮಾಡಲಾಯಿತು. ಹಾಗೂ ತಾತ್ಕಾಲಿಕ ಹಳದಿ ಪಡಿತರ ಚೀಟಿಯನ್ನು ಒಂದು ನಿಗದಿತ ದಿನಾಂಕದೊಳಗೆ ಗಣಕೀಕೃತ ಹಳದಿ ಪಡಿತರ ಚೀಟಿಗಳಾಗಿ ಪರಿವರ್ತಿಸಬೇಕೆಂದು ತೀರ್ಮಾನಿಸಲಾಯಿತು.

ಹಳದಿ ಪಡಿತರ ಚೀಟಿ ಯೋಜನೆಯಡಿ ಗುರುತಿಸಲ್ಪಟ್ಟ ಎಲ್ಲಾ ಅರ್ಹ ಕುಟುಂಬಗಳಿಗೂ ಈಗಾಗಲೇ ಗಣಕೀಕೃತ ಹಳದಿ ಪಡಿತರ ಚೀಟಿ ಅಥವಾ ತಾತ್ಕಾಲಿಕ ಹಳದಿ ಪಡಿತರ ಚೀಟಿಯನ್ನು ವಿತರಿಸಲು ಕ್ರಮ ಕೈಗೊಳ್ಳಲಾಗಿದೆ ಈ ಹಿನ್ನೆಲೆಯಲ್ಲಿ ಹಳದಿ ಪಡಿತರ ಚೀಟಿ ಯೋಜನೆಯನ್ನು ದಿನಾಂಕ: 1.11.2003 ರಿಂದ ಜಾರಿಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 192 ಡಿಆರ್ಎ 2000 (ಭಾಗ-6) ಬೆಂಗಳೂರು, ದಿನಾಂಕ: 23ನೇ ಅಕ್ಟೋಬರ್ 2003**

ಹಳದಿ ಪಡಿತರ ಚೀಟಿ ಯೋಜನೆಯನ್ನು ರಾಜ್ಯಾದ್ಯಂತ ದಿನಾಂಕ: 1.11.2003 ರಿಂದ ಜಾರಿಗೊಳಿಸಲು ಈ ಕೆಳಕಂಡಂತೆ ಸರ್ಕಾರವು ಆದೇಶಿಸುತ್ತದೆ.

(ಅ) ಹಳದಿ ಪಡಿತರ ಚೀಟಿ ಯೋಜನೆಯು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಅಂದರೆ ಈಗಾಗಲೇ ಹಳದಿ ಪಡಿತರ ಚೀಟಿ ಯೋಜನೆಯು ಜಾರಿಯಲ್ಲಿರುವ 6 ಜಿಲ್ಲೆಗಳು ಮತ್ತು ಒಂದು ತಾಲ್ಲೂಕು ಒಳಗೊಂಡಂತೆ (ಬಳ್ಳಾರಿ, ಕೊಡಗು, ಬಾಗಲಕೋಟೆ, ದಕ್ಷಿಣ ಕನ್ನಡ, ಮೈಸೂರು ಮತ್ತು ಬೆಂಗಳೂರು ಜಿಲ್ಲೆಗಳು ಮತ್ತು ಬೆಳಗಾಂ ಜಿಲ್ಲೆಯ ಬೈಲಹೊಂಗಲ ತಾಲ್ಲೂಕು) ಎಲ್ಲಾ ಜಿಲ್ಲೆಗಳಲ್ಲಿ ದಿನಾಂಕ: 1.11.2003 ರಿಂದ ಜಾರಿಗೆ ಬರತಕ್ಕದ್ದು.

(ಆ) ಹಳದಿ ಪಡಿತರ ಚೀಟಿ ಯೋಜನೆಯು ಜಾರಿಗೊಳಿಸಿದ ದಿನಾಂಕ: 1.11.2003ರಿಂದ ರಾಜ್ಯಾದ್ಯಂತ ಕುಟುಂಬಗಳು ಹೊಂದಿರುವ ಎಲ್ಲಾ ಹಸಿರು ಕಾರ್ಡುಗಳು ರದ್ದಾಗತಕ್ಕದ್ದು ಮತ್ತು ಈ ಕಾರ್ಡುಗಳಿಗೆ ಆಹಾರಧಾನ್ಯಗಳನ್ನು ವಿತರಿಸುವಂತಿಲ್ಲ.

(ಇ) ಹಳದಿ ಪಡಿತರ ಚೀಟಿ ಯೋಜನೆಯಡಿಯಲ್ಲಿ ಗುರುತಿಸಲಾಗಿರುವ ಅರ್ಹ ಕುಟುಂಬಗಳಿಗೆ ವಿತರಿಸಲಾಗಿರುವ ಗಣಕೀಕೃತ ಹಳದಿ ಪಡಿತರ ಚೀಟಿ ಮತ್ತು ತಾತ್ಕಾಲಿಕ ಹಳದಿ ಪಡಿತರ ಚೀಟಿಯನ್ನು ಹೊಂದಿರುವ ಪಡಿತರ ಚೀಟಿದಾರರಿಗೆ ಪ್ರತಿ ಕುಟುಂಬಕ್ಕೆ ಪ್ರತಿ ತಿಂಗಳು 28 ಕೆ.ಜಿ. ಅಕ್ಕಿ ಮತ್ತು 7 ಕೆ. ಜಿ. ಗೋಧಿಯನ್ನು ಕ್ರಮದಾಗಿ ಕೆ.ಜಿ.ಗೆ ರೂ. 6.15 ಮತ್ತು ರೂ. 4.65ರ ದರದಲ್ಲಿ ವಿತರಿಸತಕ್ಕದ್ದು.

(ಈ) ರಾಜ್ಯಾದ್ಯಂತ ಅಂತ್ಯೋದಯ ಅನ್ನ ಯೋಜನೆ ಅಡಿಯಲ್ಲಿ ಫಲಾನುಭವಿಗಳಾಗಿ ಗುರುತಿಸಲ್ಪಟ್ಟ ಕುಟುಂಬಗಳು ಪ್ರತಿ ತಿಂಗಳೂ 28 ಕೆ.ಜಿ. ಅಕ್ಕಿ ಮತ್ತು 7 ಕೆ.ಜಿ. ಗೋಧಿಯನ್ನು ಕ್ರಮವಾಗಿ ಕೆ.ಜಿ.ಗೆ ರೂ. 3.00 ಮತ್ತು ರೂ. 2.00ರ ದರದಲ್ಲಿ ಪಡೆಯುತ್ತಿರುವುದನ್ನು ಮುಂದುವರಿಸತಕ್ಕದ್ದು.

(ಉ) ಗಣಕೀಕೃತ ಹಳದಿ ಪಡಿತರ ಚೀಟಿ ತಾಂತ್ರಿಕವಾಗಿ ಹಾಗೂ ಆಡಳಿತಾತ್ಮಕ ಕಾರಣಗಳಿಗಾಗಿ ನೀಡುವುದು ಸಾಧ್ಯವಾಗದ ಕಾರಣ, ತಾತ್ಕಾಲಿಕ ಹಳದಿ ಪಡಿತರ ಚೀಟಿಯನ್ನು ಅನೇಕ ಕುಟುಂಬಗಳಿಗೆ ವಿತರಿಸಲಾಗಿದ್ದು, ಈ ತಾತ್ಕಾಲಿಕ ಹಳದಿ ಪಡಿತರ ಚೀಟಿಯನ್ನು ದಿನಾಂಕ: 31.12.2003 ರೊಳಗೆ ಗಣಕೀಕೃತ ಹಳದಿ ಪಡಿತರ ಚೀಟಿಗಳಾಗಿ ಪರಿವರ್ತಿಸತಕ್ಕದ್ದು.

(ಊ) ಸರ್ಕಾರಿ ಆದೇಶಗಳ ಸಂಖ್ಯೆ: ಎಫ್‌ಸಿಎಸ್ 73 ಎಫ್‌ಸಿಎಸ್ 02, ದಿನಾಂಕ: 10.10.02 ಮತ್ತು ಆನಾಸ 129 ಎಫ್‌ಸಿಎಸ್ 02, ದಿನಾಂಕ: 16.07.2003ರಲ್ಲಿ ನಿಗದಿಪಡಿಸಲಾಗಿರುವ ದರಪಟ್ಟಿಗಳಲ್ಲಿ ಹಳದಿ ಪಡಿತರ ಚೀಟಿಗಾಗಿ ನಿಗದಿಪಡಿಸಿದ್ದ ದರಪಟ್ಟಿಯು ದಿನಾಂಕ: 1.11.2003 ರಿಂದ ರದ್ದಾಗುತ್ತದೆ. ಉಳಿದಂತೆ ಹಳದಿ ಪಡಿತರ ಚೀಟಿ ಯೋಜನೆಗೆ ಸದರಿ ಆದೇಶಗಳಲ್ಲಿ ಬಿ.ಪಿ.ಎಲ್. ಮತ್ತು ಇ.ಬಿ.ಪಿ.ಎಲ್. ಅಡಿಯಲ್ಲಿ ನಿಗದಿ ಪಡಿಸಿರುವ ದರ ಪಟ್ಟಿಗಳು ದಿನಾಂಕ: 1.11.2003 ರಿಂದ ಜಾರಿಗೆ ಬರುತ್ತವೆ. ಹಳದಿ ಪಡಿತರ ಚೀಟಿ ಯೋಜನೆಯನ್ನು ಜಾರಿಗೊಳಿಸುವಾಗ ಸಗಟು ಮತ್ತು ಚಿಲ್ಲರೆ ನಾಮಿನಿದಾರರುಗಳ ಬಳಿ ಇರುವ ಸ್ಟಾಕ್‌ಗೆ ದರ ವ್ಯತ್ಯಾಸಗಳನ್ನು ಪಡೆದು ಸರ್ಕಾರಕ್ಕೆ ಆಥ್ಯರ್ಪಿಸಲು ಆಯುಕ್ತರು ಅಗತ್ಯ ಕ್ರಮ ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಎಸ್. ಉದಯಶಂಕರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 1376

## FOREST, ECOLOGY AND ENVIRONMENT SECRETARIAT

**Sub:** Reconstitution of the Appellate Authority under the Water (Prevention and Control of Pollution) Act, 1974 and the Air (Prevention and Control of Pollution) Act, 1981

**Read :**
1. Notification No. FEE 10 EAA 97, dated: 02.03.99
2. Govt. of India, Ministry of Environment and Forests letter No. Q-17013/2/99-CPW, dated: 30.5.2001.
3. D.O.No. RPS. 52/2001, dated: 20.1.2003 from the Registrar General, High Court of Karnataka, Bangalore.

**Preamble:**

The Appellate Authority to be constituted under Section 28 of the Water (Prevention and Control of Pollution) Act, 1974 and under section 31 of the Air (Prevention and Control of Pollution) Act, 1981 was last re-constituted in Notification read at (1) above, In letter cited at (2) above, Govt. of India, Ministry of Environment and Forests have referred to the judgment/order dated: 27.1.99 rendered by the Hon'ble Supreme Court in the matter of A.P. Pollution Control Board Vs. Prof. M. V. Nayudu & Others (Civil Appeal No. 360-371 of 1999) wherein, inter alia, the Hon'ble Court has issued directions to all the States/ Union Territories for reconstitution of the Appellate Authority under the Acts referred to above with a judge in the rank of a High Court Judge or a Supreme Court Judge-Sitting or retired-as it's Chairman along with two others as members pending Govt. of India bringing in necessary amendments to the appeal provisions of the Water and the Air Acts. When consulted, the Registrar General, High Court of Karnataka in letter cited at (3) above has intimated that Mr. Justice H. N. Narayan be appointed as Chairman of the Appellate. Authority. Hence the order.

**Government Order No. FEE 17 EAA 99 Bangalore Dated: 23rd October 2003.**

In terms of Section 28 of the Water (Prevention and Control of Pollution) Act, 1974 and under Section 31 of the Air (Prevention and Control of Pollution) Act, 1981, Govt. hereby accords approval for the reconstitution of the Appellate Authority with Mr. Justice H. N. Narayan Retired Judge of High Court of Karnataka as Chairman along with Prof. Lahiri and Shri G. C. Tallur as members of the Authority. Mr. Justice H. N. Narayan shall hold office for a term of three years or 65 years of age whichever is earlier. A Notification shall be issued to this effect separately.

The other terms and conditions of appointment shall be as specified below:

i) The Appellate Authority shall entertain appeals u/s 28 and 31 respectively of the Water and Air Acts.

ii) The Chairman, Appellate Authority shall be entitled for reappointment salary of Rs. 26,000/- (Twenty six thousand) per month including pension.

iii) The Chairman, Appellate Authority shall be provided with office and residential telephone facility as per the existing rules.

iv) He shall also be provided with official conveyance.

v) The orders of appointment of the Chairman, Appellate Authority shall be effective from the date of assumption of charge as Chairman, Appellate Authority.

vi) The Authority shall henceforth function in the premises assigned for it i.e. 6th Floor, P.U. Building, M. G. Road, Bangalore-560 001.

vii) Facilities extended to the Chairman, Karnataka Appellate Tribunal shall be extended to the Chairman of the Appellate Authority also.

viii) The expenditure shall be met under the budget head 3435-60-800-0-06 (Establishment of Appellate Authority)

This order issues with the concurrence of the Finance Department vide note No. FD 1284 Expr-2/2003, dated: 14.10.2003.

By virtue of this order, Order No. FEE 17 EAA 99, Dated: 31.7.03 issued earlier stands withdrawn.

By Order and in the name of the Governor of Karnataka,

**V. R. GAIKWAD**

Under Secretary to Government,

Forest, Ecology and Environment Dept.

PR-1377

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ರವೀಂದ್ರ ವಿದ್ಯಾಸಂಸ್ಥೆ, ಚಳ್ಳಕೆರೆ, ಚಿತ್ರದುರ್ಗ ಈ ಸಂಸ್ಥೆಗೆ ನೇಮಿಸಲಾಗಿದ್ದ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಕಂಇ 36 ಮುನೋಸೊ 97, ದಿನಾಂಕ: 27.2.98.

2) ಸರ್ಕಾರಿ ಆದೇಶ ಸಂಖ್ಯೆ: ಕಂಇ 36 ಮುನೋಸೊ 97, ದಿನಾಂಕ: 16.9.98, 20.4.1999, 18.2.2001, 16.5.2000, 4.8.2000. 5.10.2000, 24.4.2001, 15.10.2001, 3.4.2002, 28.9.2002 ಮತ್ತು 8.5.2003.

3) ಆಡಳಿತಾಧಿಕಾರಿ, ರವೀಂದ್ರ ವಿದ್ಯಾ ಸಂಸ್ಥೆ, ಚಳ್ಳಕೆರೆ ಅವರ ಪತ್ರ ಸಂಖ್ಯೆ: ರ.ವಿ.ಸಂ. 48/98-99, ದಿನಾಂಕ: 20.8.2003.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿ ದಿನಾಂಕ: 27.2.98ರ ಸರ್ಕಾರಿ ಆದೇಶದಲ್ಲಿ ರವೀಂದ್ರ ವಿದ್ಯಾಸಂಸ್ಥೆ, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ ಇದಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27 (ಎ) ರ ಪ್ರಕಾರ ಚಿತ್ರದುರ್ಗ ಉಪ ವಿಭಾಗದ ಉಪ ವಿಭಾಗಾಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಆಡಳಿತಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿತ್ತು. ನಂತರ ಓದಲಾದ (2) ರಲ್ಲಿ ಆಡಳಿತಾಧಿಕಾರಿಯವರ ಕೋರಿಕೆಯಂತೆ ಕಾಲಕಾಲಕ್ಕೆ ಆಡಳಿತಾಧಿಕಾರಿಯವರ ಅವಧಿಯನ್ನು ಕಡೆಯದಾಗಿ ದಿನಾಂಕ: 2.9.2003 ರವರೆಗೆ ವಿಸ್ತರಿಸಲಾಗಿದೆ.

ಮೇಲೆ ಓದಲಾದ (3) ರ ಪತ್ರದಲ್ಲಿ ರವೀಂದ್ರ ವಿದ್ಯಾಸಂಸ್ಥೆ, ಚಳ್ಳಕೆರೆ ಇದರ ಆಡಳಿತಾಧಿಕಾರಿಗಳು ಸರ್ಕಾರಕ್ಕೆ ಪತ್ರ ಬರೆದು ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸುವ ದೃಷ್ಟಿಯಿಂದ, ಸದರಿ ಸಂಸ್ಥೆಗೆ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಬೇಕೆಂದು ಕೋರಿರುತ್ತಾರೆ. ಆಡಳಿತಾಧಿಕಾರಿಯವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 36 ಮುನೋಸೊ 97, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್ 2003**

1. ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ರ ಕಲಂ 27-ಎ (5) ರ ಪ್ರಕಾರ ಶ್ರೀ ರವೀಂದ್ರ ವಿದ್ಯಾ ಸಂಸ್ಥೆ, ಚಳ್ಳಕೆರೆ ಇದಕ್ಕೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ ನೇಮಿಸಿರುವ ಆಡಳಿತಾಧಿಕಾರಿಯವರ ಅವಧಿಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ದಿನಾಂಕ: 3.9.2003 ರಿಂದ 6 ತಿಂಗಳ ಅವಧಿಗೆ ಅಥವಾ ಸದರಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೊ ಅಲ್ಲಿಯವರೆಗೆ ವಿಸ್ತರಿಸಲಾಗಿದೆ.

2. ವಿಸ್ತರಿಸಿದ ಅವಧಿಯೊಳಗೆ ಸದರಿ ಸಂಸ್ಥೆಗೆ ಚುನಾವಣೆ ನಡೆಸಿ, ಆಡಳಿತವನ್ನು ಹಸ್ತಾಂತರಿಸಲು ಸೂಕ್ತ ಕ್ರಮ ತೆಗೆದುಕೊಳ್ಳಲು ಆಡಳಿತಾಧಿಕಾರಿಗೆ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಬ್ದುಲ್ ಹಮೀದ್**

ಪೀಠಾಧಿಕಾರಿ, (ಪ್ರಭಾರ)

ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 1378

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಜೆ. ಶ್ರೀನಿವಾಸನ್, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ಅವರ ವಿರುದ್ಧ ಇಲಾಖಾ ವಿಚಾರಣೆ- ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಕ್ರಮಾಂಕ: ಸಿಆಸುಇ 26 ಎಸ್ಇಎನ್ 2003, ದಿನಾಂಕ: 1.7.2003.

2) ಶ್ರೀ ಜೆ. ಶ್ರೀನಿವಾಸನ್, ಸರ್ಕಾರದ ಅಧೀನ ಕಾರ್ಯದರ್ಶಿ, ಅವರು ಉತ್ತರ ಸಲ್ಲಿಸಿದ ದಿನಾಂಕ: 25.7.2003.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರದ ಸಚಿವಾಲಯ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸಚಿವ ಸಂಪುಟದ ತೀರ್ಮಾನಕ್ಕೆ ವಿರುದ್ಧವಾಗಿ ತನಗಿಲ್ಲದ ಅಧಿಕಾರವನ್ನು ಚಲಾಯಿಸಿ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಅನುದಾನಿತ ಕಾಲೇಜುಗಳ ಪ್ರಾಂಶುಪಾಲರುಗಳಿಗೆ ಮಾಸಿಕ 500-00 ರೂಪಾಯಿಗಳ ವಿಶೇಷ ವೇತನ ಮಂಜೂರು ಮಾಡಿ ದಿನಾಂಕ: 22.6.2002 ರ ಆದೇಶ ಹೊರಡಿಸುವ ಮೂಲಕ ತೀವ್ರ ದುರ್ನಡತೆ ಎಸಗಿದ ಆರೋಪಕ್ಕಾಗಿ ಜೆ. ಶ್ರೀನಿವಾಸನ್, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ 1.7.2003ರ ನೋಟೀಸ್ ನೀಡಿ ಸಮಜಾಯಿಷಿಯನ್ನು ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ಶ್ರೀ ಜೆ. ಶ್ರೀನಿವಾಸನ್, ಅಧೀನ ಕಾರ್ಯದರ್ಶಿ ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 25.7.2003ರ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿದ್ದಾರೆ. ಆರೋಪಿತರ ಉತ್ತರವನ್ನು ಪರಿಶೀಲಿಸಿ ಅದು ಮನಗಾಣಿಸುವಂತಾಗಿರುವುದಿಲ್ಲವಾದ್ದರಿಂದ ಅವರ ವಿರುದ್ಧ ಮಾಡಲಾದ ಆರೋಪಗಳ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ಕಂಡುಕೊಳ್ಳುವುದು ಅತ್ಯವಶ್ಯಕವಾಗಿದೆಯೆಂದು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 26 ಎಸ್‌ಇಎನ್ 2003, ಬೆಂಗಳೂರು ದಿನಾಂಕ: 21ನೇ ಅಕ್ಟೋಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಜೆ. ಶ್ರೀನಿವಾಸನ್ ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ಅವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಬಗ್ಗೆ ವಿಚಾರಣೆ ಮಾಡಲು ಶ್ರೀ ಕೆ. ಈಶ್ವರ್ ಭಟ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು, ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರಿಗೆ 5,000-00 ರೂಪಾಯಿಗಳ ಗೌರವ ಧನ ನೀಡಲಾಗುವುದು ಹಾಗೂ ಸರ್ಕಾರದ ಆದೇಶ ಕ್ರಮಾಂಕ: ಸಿಆಸುಇ 45 ಸೇಇವಿ 2001, ದಿನಾಂಕ: 4.3.2002 ರಲ್ಲಿ ನಿಗದಿಪಡಿಸಿರುವಂತೆ ಅವರ ವಾಹನ ಭತ್ಯೆ ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ) ಅವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಶೀಘ್ರಲಿಪಿಗಾರರ: ಬೆರಳಚ್ಚುಗಾರರ ಸಹಾಯವನ್ನು ಮತ್ತು ಲೇಖನ ಸಾಮಗ್ರಿಗಳನ್ನು ಒದಗಿಸಲು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಅವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು ಶೀಘ್ರವಾಗಿ ಕೈಗೆತ್ತಿಕೊಂಡು 3 ತಿಂಗಳೊಳಗಾಗಿ ಮುಗಿಸಿ ವರದಿಯನ್ನು ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3).

ಪಿ.ಆರ್. 1379

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಹುಬ್ಬಳ್ಳಿಯ ಕಿಮ್ಸ್‌ನ ಪ್ರಸೂತಿ ಮತ್ತು ಸ್ತ್ರೀರೋಗ ಶಾಸ್ತ್ರ ಪ್ರಾಧ್ಯಾಪಕರಾದ ಡಾ: ಸುಧಾರಾವ್ ರವರ ಅನಧಿಕೃತ ಗೈರುಹಾಜರಿಯ ಮೇಲಿನ ಇಲಾಖಾ ವಿಚಾರಣೆ.

**ಓದಲಾಗಿದೆ:**
1) ದಿನಾಂಕ: 18.6.1994 ಸಂಖ್ಯೆ: ಆಕುಕ 262 ಎಂಎಂಸಿ 87ರ ನೋಟೀಸ್
2) ದಿನಾಂಕ: 01.11.1999 ಸಂಖ್ಯೆ: ಆಕುಕ 262 ಎಂಎಂಸಿ 87ರ ಸರ್ಕಾರಿ ಆದೇಶ
3) ದಿನಾಂಕ: 27.06.2002 ಸಂಖ್ಯೆ: ಆಕುಕ 262 ಎಂಎಂಸಿ 87ರ ಸರ್ಕಾರಿ ಆದೇಶ
4) ದಿನಾಂಕ: 01.01.2003 ಸಂಖ್ಯೆ: ಆಕುಕ 262 ಎಂಎಂಸಿ 87ರ 2ನೇ ಕಾರಣ ಕೇಳುವ ನೋಟಿಸ್.
5) ದಿನಾಂಕ: 30.01.2003ರ ಕಿಮ್ಸ್‌ನ ಓಬಿಜಿ ಪ್ರಾಧ್ಯಾಪಕರಾದ ಡಾ: ಸುಧಾರಾವ್‌ರವರ ಅರ್ಜಿ.

**ಪ್ರಸ್ತಾವನೆ:**

1) ಕರ್ನಾಟಕ ವೈದ್ಯಕೀಯ ಮಹಾವಿದ್ಯಾಲಯದ ಪ್ರಸೂತಿ ಮತ್ತು ಸ್ತ್ರೀರೋಗ ಶಾಸ್ತ್ರ ಪ್ರಾಧ್ಯಾಪಕರಾದ ಡಾ: ಸುಧಾರಾವ್‌ರವರು ದಿನಾಂಕ: 9.10.1986 ರಿಂದ ಅನಧಿಕೃತವಾಗಿ ಗೈರುಹಾಜರಾದ ಆರೋಪದ ಮೇಲೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ 11ನೇ ನಿಯಮದಡಿ ನವ್ಯವಾಗಿ ದಿನಾಂಕ: 18.06.1994ರ ನೋಟೀಸ್‌ನಲ್ಲಿ ದೋಷಾರೋಪಣೆಯನ್ನು ರೂಪಿಸಲಾಗಿತ್ತು. ಡಾ: ಸುಧಾರಾವ್‌ರವರು ದೋಷಾರೋಪಣೆಯನ್ನು ನಿರಾಕರಿಸಿದ್ದರು. ದಿನಾಂಕ: 01.11.1999ರ ಸರ್ಕಾರಿ ಆದೇಶದಲ್ಲಿ ನಿವೃತ್ತ ಜಿಲ್ಲಾ ನ್ಯಾಯಾಧೀಶ ಶ್ರೀ ಎಸ್.ಎ. ತಿಲಗುಲ್‌ರವರನ್ನು ವಿಚಾರಣಾ ಪ್ರಾಧಿಕಾರಿಯನ್ನಾಗಿ ಮತ್ತು ವೈದ್ಯಕೀಯ ಶಿಕ್ಷಣ ಉಪ ನಿರ್ದೇಶಕರನ್ನು ಮಂಡನಾಧಿಕಾರಿಯಾಗಿ ನೇಮಿಸಲಾಗಿತ್ತು. 4 ತಿಂಗಳ ಅವಧಿಯಲ್ಲಿ ಅವರು ವಿಚಾರಣೆಯನ್ನು ಮುಕ್ತಾಯಗೊಳಿಸಿ ವರದಿಯನ್ನು ಸಲ್ಲಿಸಿಲ್ಲದ ಕಾರಣ ದಿನಾಂಕ: 27.06.2002ರ ಸರ್ಕಾರಿ ಆದೇಶದಲ್ಲಿ ನಿವೃತ್ತ ಜಿಲ್ಲಾ ನ್ಯಾಯಾಧೀಶ ಶ್ರೀ ಎನ್. ಎಸ್. ಸಂಗೊಳ್ಳಿರವರನ್ನು ವಿಚಾರಣಾ ಪ್ರಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾ ಪ್ರಾಧಿಕಾರಿಯು ವಿಚಾರಣಾ ವರದಿಯನ್ನು ಸಲ್ಲಿಸಿದ್ದು ಡಾ: ಸುಧಾರಾವ್‌ರವರು ದಿನಾಂಕ: 09.10.1986 ರಿಂದ ಕರ್ತವ್ಯಕ್ಕೆ ಹಾಜರಾಗದೇ ಇರುವುದು

